ಮನೋಹರ ಬಾಲಸಾಹಿತ್ಯ ೯

# ತುಷಾರಮಣಿ

( ಗ್ರಿಮ್ ಸೋದರರ ಜನಪದ ಕಥೆಯೊಂದರ ಆಧಾರದ ಮೇಲೆ )




ಸಮಾಜ ಪುಸ್ತಕಾಲಯ

ಭಗತಸಿಂಗ್‌ಬೀದಿ

ಧಾರವಾಡ.

ಪ್ರಥಮ ಮುದ್ರಣ   ೧೯೫೯

ಬೆಲೆ   ೦ ೪೦



## ಮಕ್ಕಳಿಗೆ ಮುದ್ದಾದ ಪುಸ್ತಕಗಳು !

| | |
|---|---|
| ಅವಿವೇಕಿ ಅರಸು | ೦ ೩೭ |
| ಬುದ್ಧಿಬಲದ ಕಥೆಗಳು | ೦ ೨೫ |
| ಮಂದಾರ ಮಾಲೆ | ೦ ೫೦ |
| ಪಂಚಾಮೃತ | ೦ ೫೦ |
| ಜನಪದ ಕಥೆಗಳು | ೦ ೩೨ |
| ಪಂಚಶೀಲದ ಪ್ರತಿನಿಧಿಗಳು | ೦ ೪೦ |
| ಬುದ್ಧನ ಕಥೆ | ೦ ೬೨ |
| ದೃಢ ನಿರ್ಧಾರ | ೦ ೬೩ |

ಬರೆಯಿರಿ

ಸಮಾಜ ಪುಸ್ತಕಾಲಯ, ಧಾರವಾಡ.



ಮುದ್ರಕರು, ಪ್ರಕಾಶಕರು
ಬಾಲಚಂದ್ರ ಘಾಣೇಕರ
ಪ್ರತಿಭಾ ಮುದ್ರಣ   ಸಮಾಜ ಪುಸ್ತಕಾಲಯ
ಭಗತಸಿಂಗ ಬೀದಿ, ಧಾರವಾಡ



೧

ಹಿಂದಕ್ಕೆ ಒಬ್ಬ ಅರಸಿ ಇದ್ದಳು ಅರಸ-ಅರಸಿಯರಿಗೆ ಬೇಕುಬೇಕಾದಷ್ಟು ಸಂಪತ್ತು ಇತ್ತು—ಐಶ್ವರ್ಯವಿತ್ತು. ಸಿರಿದೇವಿಯೇ ಅವರ ಅರಮನೆಯಲ್ಲಿ ಕಾಲು ಮುರಿದುಕೊಂಡು ಬಿದ್ದಂತಿತ್ತು ಆದರೆ ಅವರಿಗ ಒಂದೇ ಒಂದು ಚಿಂತೆ—'ಮಕ್ಕಳಿಲ್ಲ'ದ ಚಿಂತೆ. ಹೀಗಾಗಿ ಅರಸಿಗೆ ಏನು ಮಾಡುವುದಕ್ಕೂ ಮನಸ್ಸಿಲ್ಲ ತನ್ನ ಗೆಳತಿಯರೊಂದಿಗ ಸರಸ-ಸಲ್ಲಾಪ ನಡೆಸುವುದೂ ಅವಳಿಗೆ ಒಗ್ಗುತ್ತಿರಲಿಲ್ಲ ಏನೂ ಬೇಡವೆನಿಸಿಬಿಟ್ಟಿತ್ತು ಅವಳಿಗೆ. ಯಾವೊತ್ತೂ ತನ್ನ——ಪುರದಲ್ಲಿಯೇ ಏಕಾಂತವಾಗಿ ಕಾಲ್ಕಳೆಯುತ್ತಿದ್ದಳು ಅವಳು ಹಾಗೆ ಕುಳಿತು ಕುಳಿತು ಬೇಜಾರು

ಬಂದರೆ ಆಗೀಗ ಕಸೂತಿ-ಹೊಲಿಗೆಗಳಲ್ಲಿ ಕೈ ತೊಡಗಿಸುತ್ತಿದ್ದಳು ಅಷ್ಟೇ.

ಹೀಗೊಂದು ದಿನ ಇಳಿಹೊತ್ತಿನಲ್ಲಿ ಅವಳು ತನ್ನ ಆ ರಹಸ್ಯಸ್ಥಳದಲ್ಲಿ ಕಸೂತಿಗ ರೇಶ್ಮ ತುಂಬುತ್ತ ಕುಳಿತಿದ್ದಳು. ಅವಳು ಕುಳಿತುದು ಕಿಟಕಿಯ ಬಳಿ ಪ್ರಸ್ತುದಲ್ಲಿ ಹೊರಗೆ ಮಳೆ 'ಜಿನಿ-ಜಿನಿ' ಜಿನುಗತೊಡಗಿತು ಹನಿಗಳ ಸಪ್ಪಳ ಕೇಳಿ ರಾಣಿಯ ಲಕ್ಷ್ಯ ಒಮ್ಮೆಲೆ ಕಿಟಕಿಯ ಹೊರಗೆ ಹರಿಯಿತು

ಮುಳುಗುತ್ತಿದ್ದ ಸೂರ್ಯನ ಹೊಂಬಣ್ಣದಿಂದ ಮಳೆಯ ತುಷಾರಗಳು 'ಪಳಪಳ' ಮುತ್ತಿನಂತೆ ಹೊಳೆಯುತ್ತಿದ್ದುವು ಮಾಲೆಯಿಂದ ದಾರಿತಪ್ಪಿ ಕಳಚಿಬೀಳುವ ಮುತ್ತುಗಳಂತೆ ಆ ತುಷಾರಗಳು ಧಾರೆಯಾಗಿ ಬೀಳುತ್ತಿದ್ದುವು. ಶರದೃತುವಿನ, ಹಿಂಜಿದ ಅರಳೆಯಂತಹ ಬಿಳಿ ಮೋಡಗಳು ವಾತಾವರಣದಲ್ಲಿ ತೇಲುತ್ತಿದ್ದುವು. ಆ ಶುಭ್ರ ಮೋಡ, ಸ್ವಚ್ಛ ಸ್ಫಟಿಕರಸದಂತಹ ತುಷಾರಗಳು— ಇವುಗಳ ಅನುಪಮ ಸೌಂದರ್ಯ ನೋಡುತ್ತ ಅರಸಿ ಮುಗ್ಧಳಾದಳು ಅವಳಿಗೆ ತಾನು ಮಾಡುತ್ತಿದ್ದ ಕಲಸವೇ ಮರವೆಯಾಗಿಹೋಯಿತು. ತನ್ನ ಬಲಗೈಯಲ್ಲಿ ಸೂಜಿಯಿದೆಯೆಂಬ ಅರಿವೂ ಅವಳಿಗಿರಲಿಲ್ಲ. ಈ ಚಂಚಲತೆಯಿಂದ ಸೂಜಿ ಬಟ್ಟೆಯ ಬದಲು ಬಲಗೈಯ ಹೆಬ್ಬೆರಳಿಗೆ ತಗಲಿತು. 'ಹಾಯ್!' ಎನಿಸಿತು ಚುಚ್ಚಿದ ಸ್ಥಳದಿಂದ ಸಣ್ಣದೊಂದು ರಕ್ತದ ಹನಿ

ಒಸರಿತು ಒಡನೆಯೇ ಅರಸಿ ಹಬ್ಬೆರಳನ್ನು ಅದುಮಿ ಹಿಡಿದಳು ಕೆಂಪಗಿನ ರಕ್ತದ ಹನಿ ಜೋರಿ ಅವಳ ಸೀರೆಯ ಮೇಲ ಬಿದ್ದಿತು ಇದನ್ನವಳು ಒಳ್ಳೆಯ ಕುತೂಹಲದಿಂದ, ನಟ್ಟನೋಟದಿಂದ ನೋಡುತ್ತಿದ್ದಳು. ತನ್ನ ರಕ್ತದ ಹನಿಯನ್ನು ನೋಡಿದುದು ಇದೇ ಮೊದಲಬಾರಿ ಅವಳು 'ಅಹಾ! ಈ ರಕ್ತದ ಹನಿ ಎಷ್ಟು ಕಡುಕಂಪು, ಆದರೆ ಅದೇ ಹೊರಗೆ ಬೀಳುತ್ತಿರುವ ತುಷಾರಗಳು ಎಷ್ಟು ಬಿಳಿವು' ಅರಸಿಯು ಮನದಲ್ಲಿ ಇದ್ದಕ್ಕಿದ್ದಂತ ಒಂದು ವಿಚಾರ ಮೂಡಿತು "ಆ ತುಷಾರದಂಥ ನಿರ್ಮಲ ಬಣ್ಣದ ದೇಹ, ಈ ರಕ್ತದಂತೆ ಕೆಂಪಾದ ತುಟಿ-ತುಂಬುಗಲ್ಲಗಳು, ಈ ರೇಶಿಮೆಯಂತಯೇ ಮಿನುಗುವ ನಯವಾದ ಕೂದಲು— ಹೀಗೆಲ್ಲ ಇರುವ ಚೆಲುವೆಯಾದ ಒಬ್ಬ ಮಗಳಾದರೂ ನನಗೆ ಇದ್ದುದಾಗಿದ್ದರೆ ಎಷ್ಟು ಚಿನ್ನಾಗುತಿತ್ತು" ಎಂದು ಅವಳಿಗೆನ್ನಿಸಿತು.

ಕೆಲವು ದಿನಗಳು ಹೀಗಯೇ ಉರುಳಿದುವು. ಅರಸಿಯ ಅಭಿಲಾಷೆ ಈಡೇರಿತು ಅವಳು ತಾನಿಚ್ಛಿಸಿದಂತೆಯೇ ಚೆಲುವಾದ ಮಗಳನ್ನು ಪಡೆದಳು. ಗೌರವರ್ಣ, ಅರಳಿದ ಕೆಂಪು ಗುಲಾಬಿಯಂತಹ ತುಟಿಗಳು, ನೀಳವಾದ ಮೂಗು, ಗುಲಾಬಿ ವರ್ಣದ ತುಂಬುಹಾಲುಗಲ್ಲಗಳು, ರೇಶ್ಮೆಯಂತೆ ಹೊಳೆಯುವ ಗುಂಗುರು ಕೂದಲು. ಕಪ್ಪುರದ ಬೊಂಬೆಯಂತೆ ಅಂದವಾಗಿದ್ದಿತು ಕೂಸು ಅರಸು-ಅರಸಿಯರು

ಸಂತೋಷದಿಂದ ಓಲಾಡಿದರು ಮಗುವಿಗೆ ' ತುಷಾರ ಮಣಿ ' ಎಂದು ಹೆಸರಿಡಲಾಯಿತು. ಅದು ಅರಸಿಯ ಮೆಚ್ಚಿನ ಹೆಸರು

ಆದರೆ ಅದೇನು ದುರದೃಷ್ಟವೋ ಏನೋ, ಮಗುವಿನ ತಾಯಿ ವರುಷೊಪ್ಪತ್ತಿನಲ್ಲಿಯೇ ತೀರಿಕೊಂಡಳು ಮಗು ತಾಯಿಯಿಲ್ಲದ ತಬ್ಬಲಿಯಾಯಿತು ಇನ್ನು ' ತುಷಾರ ಮಣಿ 'ಯ ಪಾಲನೆ-ಪೋಷಣೆಯಾಗುವುದೆಂತು ? ಅರಸನಿಗೆ ದೊಡ್ಡ ಚಿಂತೆಯೇ ಬಿತ್ತು. ದಾದಿಯರನ್ನು ಇರಿಸುವುದಕ್ಕಿಂತ ಅವಳಿಗೆ ಒಬ್ಬ ಹೊಸ ತಾಯಿಯನ್ನು ತರುವುದೇ ಮೇಲು ಎಂದು ಎನ್ನಿಸಿತು ಅವನಿಗ. ಮರುವರುಷವೇ ಅರಸು ಹೊಸ ಮದುವೆ ಮಾಡಿಕೊಂಡ ಹೊಸ ರಾಣಿ ಅರಮನೆಗೆ ಬಂದಳು

ಹೊಸರಾಣಿ ಬಲು ಚೆಲುವೆ. ತನ್ನ ಚೆಲುವಿಕೆಯ ಬಗೆಗೆ ಅವಳಿಗೆ ಬಹಳ ಹೆಮ್ಮೆ ಅವಳು ಅಷ್ಟೇ ದುಷ್ಟ ಬುದ್ಧಿಯವಳೂ ಆಗಿದ್ದಳು. ಜಗತ್ತಿನಲ್ಲಿ ತನಗಿಂತ ಸುಂದರಿಯಾದ ಹೆಂಗುಸು ಯಾರೂ ಇರಕೂಡದೆಂಬ ದುರ್ಬುದ್ಧಿ ಅವಳದು ಆ ರಾಣಿಯ ಬಳಿಯಲ್ಲಿ ಒಂದು ವಿಚಿತ್ರ ಕನ್ನಡಿಯಿತ್ತು, ಅದು ' ಮಾಯದ ಕನ್ನಡಿ '. ಯಾವುದೊಂದು ಪ್ರಶ್ನೆಯನ್ನು ಕೇಳಿದರೆ, ಅದಕ್ಕೆ ಸರಿಯಾದ ಉತ್ತರವನ್ನು ಹೇಳುತ್ತಿತ್ತು ಅದು ರಾಣಿ ಪ್ರಾಯಶಃ ಆ ಕನ್ನಡಿಯೊಡನೆ ಕೇಳುವ ಪ್ರಶ್ನೆಯೆಂದರೆ ಒಂದೇ :

" ನಾನು ಎಲ್ಲರಿಗಿಂತ ಸುಂದರಿಯಲ್ಲವೇ ? " ಎಂದು

" ಹೌದು ರಾಣಿ ನೀನು ಪ್ರಪಂಚದಲ್ಲಿಯೇ ಅಪ್ರತಿಮ ಸುಂದರಿ " ಎಂದು ಕನ್ನಡಿ ಉತ್ತರಿಸುತ್ತಿತ್ತು ಪ್ರತಿಸಲ

ಹೀಗೆಯೇ ದಿನಗಳು ಕಳೆದುವು. ತುಷಾರಮಣಿ ಹತ್ತುವರುಷದ ಹುಡುಗೆಯಾದಳು ಬಿದಿಗೆಯ ಚಂದಿರನಂತೆ ಅವಳ ಚೆಲುವಿಕೆ ದಿನದಿನಕ್ಕೆ ಹೆಚ್ಚತೊಡಗಿತು. ನೋಡುವುದಕ್ಕೆ ಅವಳು ಗಂಧರ್ವಕನ್ಯೆಯಂತೆ ಕಾಣತೊಡಗಿದಳು

ಒಂದು ದಿನ ರಾಣಿ ಎಂದಿನಂತೆ ತನ್ನ ಮಾಯದ ಕನ್ನಡಿಯ ಮುಂದೆ ನಿಂತುಕೊಂಡಿದ್ದಳು ಒಮ್ಮೆ ಗೋಣು, ಒಮ್ಮೆ ಭುಜ, ಒಮ್ಮೆ ನಡ— ಹೀಗೆ ಬಳುಕಿಸಿ, ಕೊಂಕಿಸಿ ತನ್ನ ಚೆಲುವಿನ ಅಂದವನ್ನು ಕನ್ನಡಿಯಲ್ಲಿ ನೋಡಿ ಹಿಗ್ಗಿದಳು ಆಕೆ ತನ್ನ ಚೆಲುವಿಕೆಯ ಬಗೆಗೆ ಅವಳಿಗೆ ವಿಪರೀತ ಗರ್ವವೆನಿಸಿತು ಮುಖದಲ್ಲಿಯೇ ಸಣ್ಣ ನಗುವೊಂದನ್ನು ನಕ್ಕಳು ವಾಡಿಕೆಯಂತೆ ಕನ್ನಡಿಯೊಡನೆ ಪ್ರಶ್ನಿಸಿದಳು. ಆದರೆ ಇಂದು ಕನ್ನಡಿ ಉತ್ತರಿಸಿದ್ದೇನು ?—

" ರಾಣಿ, ಇನ್ನು ನಿನ್ನ ಜಂಬ ಸಾಕು. ತುಷಾರಮಣಿ ಈಗ ನಿನಗಿಂತ ಹೆಚ್ಚಿನ ಚೆಲುವನ್ನು ಪಡೆಯುತ್ತಿದ್ದಾಳೆ "

ಇದನ್ನು ಕೇಳಿ ರಾಣಿಯ ಮೈ ಉರಿಯಿತು, ಹೊಟ್ಟೆಕಿಚ್ಚಿನಿಂದ ಉರಿದುಹೋದಳು ಆಕೆ ಈ ಮತ್ಸರವು ರೋಗ

ವಾಗಿಯೇ ಪರಿಣಮಿಸಿತು ಅವಳಲ್ಲಿ ದಿನದಿನಕ್ಕೆ ರೋಗ ಹೆಚ್ಚಾಗಿ ಅವಳು ಕೊರಗಹತ್ತಿದಳು ಇನ್ನು ಇದಕ್ಕ ಏನು ಉಪಾಯ ? ರಾಣಿಗೊಂದು ಉಪಾಯ ಹೊಳೆಯಿತು. ಈ ರೋಗಕ್ಕೆ ಕಾರಣಳಾದ ತುಷಾರಮಣಿಯನ್ನೇ ಮುಗಿಸಿಬಿಡ ಬೇಕೆಂದು ಯೋಚಿಸಿದಳು ಹೌದು, ಇದೇ ಒಳ್ಳೆಯ ಉಪಾಯ ಎಂದು ಅವಳು ಒಬ್ಬ ಕೊಲೆಗಡಕನನ್ನು ತನ್ನ ತಾವಿಗೆ ಕರೆಯಿಸಿಕೊಂಡಳು. 'ಈ ಕೆಟ್ಟ ಹುಡುಗಿಯನ್ನು ಯಾವುದಾದರೂ ಕಾಡಿನಲ್ಲಿ ಒಯ್ದು ಕೊಂದುಹಾಕಿಬಿಡು' ಎಂದು ಆಜ್ಞೆ ಇತ್ತಳು. ಇದಕ್ಕೋಸ್ಕರ ಕೆಲವು ಚಿನ್ನದ ನಾಣ್ಯಗಳನ್ನು ಅವನಿಗೆ ಬಹುಮಾನವಾಗಿ ಕೊಟ್ಟಳು ಅವನೂ ಹಿಗ್ಗಿದ ತುಷಾರಮಣಿಯ ಕೈ ಹಿಡಿದುಕೊಂಡು ಒಂದು ದಟ್ಟವಾದ ಅರಣ್ಯಕ್ಕೆ ಬಂದ ಅವನು ಯಾವ ನರ ಪಿಳ್ಳೆಯ ಸುಳಿವೂ ಅಲ್ಲಿರಲಿಲ್ಲ. ತನ್ನ ಕೆಲಸ ಮುಗಿಸಿಬಿಡ ಬೇಕೆಂದು ಟೊಂಕದಲ್ಲಿದ್ದ ಕಿರುಗತ್ತಿಯನ್ನು ಹೊರಗೆ ತೆಗೆದ ಇನ್ನೇನು, ಅವಳನ್ನು ಇರಿದುಬಿಡಲು ಸಿದ್ಧನಾದ.

ಕತ್ತಿಯ ಹೊಳೆಹೊಳೆಯುವ ಮೊನೆಯನ್ನು ಕಂಡು ತುಷಾರಮಣಿ ಬೆಚ್ಚಿ ನಡುಗಿದಳು. ಅವನ ಎತ್ತಿದ ಕೈ-ಯನ್ನು ನೋಡಿ ಅವಳಿಗೆ ಅಳು ಬಂದಿತು. ಬಿಕ್ಕುತ್ತ ಅವಳು ಅವನನ್ನು ಕೇಳಿದಳು, "ಇದೇನು, ನನ್ನನ್ನೇ ಕೊಲ್ಲಲು ಬಂದಿದ್ದೀಯೇನಪ್ಪಾ ನಿನ್ನ ದಮ್ಮಯ್ಯ, ನನ್ನನ್ನು ಬಿಟ್ಟು ಬಿಡು ನನ್ನನ್ನು ಕೊಲ್ಲುವುದರಿಂದ ನಿನಗೇನಾಗಬೇಕಿದೆ?"

ಕೊಲೆಗಡಕನಿಗೆ ಕರುಣೆ ಬಂದಿತು ಪಾಪ! ಎನಿಸಿತು ಅವನಿಗೆ ಇದ್ದ ಸಂಗತಿಯನ್ನು ಹೇಳಿಬಿಟ್ಟ ಇದಕ್ಕೆ ತುಷಾರಮಣಿ, "ನಾನು ಮಲಅಮ್ಮನಿಗೆ ಬೇಡವಾಗಿದ್ದರೆ ಇನ್ನು ನಾನೆಂದಿಗೂ ಅರಮನೆಗೆ ಬರುವುದಿಲ್ಲ ಬಿಡು ಎಲ್ಲಿಯಾದರೂ ಹೊರಟುಹೋಗುತ್ತೇನೆ ದಯಮಾಡಿ ನನ್ನನ್ನು



ಬಿಟ್ಟುಬಿಡಪ್ಪ ಕೊಲ್ಲಬೇಡ" ಎಂದು ಅಂಗಲಾಚಿದಳು. ಕೊಲೆಗಡಕನ ಎದೆ ಪೂರಾ ಕರಗಿತು ಇಂತಹ ಮುದ್ದು ಮಗುವನ್ನು ಕೈಯಾರೆ ಕೊಲ್ಲಲು ಅವನು ಹಿಂಜರಿದ "ಹಾಗಾದರೆ ನಿನ್ನಷ್ಟಕ್ಕೆ ನೀನು ಎಲ್ಲಾದರೂ ಹೋಗಿಬಿಡು. ಮಲಅಮ್ಮನ ಕೈಗೆ ಪುನಃ ಸಿಕ್ಕಿದೆಯೆಂದರೆ ನಿನ್ನ ಅವಸ್ಥೆ

ಮುಗಿಯಿತು ” ಎಂದು ಅವಳನ್ನು ಎಚ್ಚರಿಸಿ ಹೊರಟು ಹೋದ

ತುಷಾರಮಣಿ ಆ ದಟ್ಟಡವಿಯ ಒಂದು ಕಾಲುಹಾದಿ ಗುಂಟ ಬಹಳ ದೂರ ನಡೆದಳು ಕಲ್ಲು-ಮುಳ್ಳುಗಳಲ್ಲಿ ಎಡವುತ್ತ-ಮುಗ್ಗುತ್ತ ಹೊರಟಳು ಅವಳಿಗೆ ಬಹಳ ದಣಿ ವಾಗಿತ್ತು. ಆದರೇನು, ರಾತ್ರಿಯೊಳಗಾಗಿ ಒಂದು ಸುರಕ್ಷಿತ ತಾವನ್ನು ನೇರಬೇಡವೇ? ಆದುದರಿಂದ ಎಲ್ಲಿಯೂ ನಿಲ್ಲದೆ ನಾಗಿದಳು ಅವಳು ಒಂದು ಸಣ್ಣ ಝರಿ ಹರಿಯುತ್ತಿತ್ತು ತಿಳಿನೀರನ್ನು ಕಂಡು ಸಂತೋಷವಾಯಿತು ಅವಳಿಗೆ ಬೊಗಸ ನೀರನ್ನು ಕುಡಿದಳು ದಣಿವು ತುಸು ಆರಿತು ಝರಿಯನ್ನು ದಾಟಿ ಬೆಟ್ಟವನ್ನು ಹತ್ತಲು ತೊಡಗಿದಳು ಅಷ್ಟರಲ್ಲಿ ಕತ್ತ ಲಾಯಿತು ಹಕ್ಕಿಪಕ್ಕಿಗಳು ಚಿಲಿಪಿಲಿಗುಟ್ಟುತ್ತ ತಮ್ಮ ಗೂಡುಗಳಿಗೆ ಹೊರಟಿದ್ದುವು ತೋಳ, ನರಿಗಳ ಕೂಗನ್ನು ಕೇಳಿ ತುಷಾರಮಣಿ ಬೆಚ್ಚಿದಳು ಲಗುಬಗೆಯಿಂದ ಹೆಜ್ಜೆ ಗಳನ್ನು ದೊಡ್ಡದಾಗಿ ಇಡಹತ್ತಿದಳು ಬೆಟ್ಟದ ತುದಿಯಲ್ಲಿ ನಿಂತು ಕೆಳಗೆ ನೋಡಿದಳು ಬೆಟ್ಟದ ಅಡಿಯಲ್ಲಿ ಒಂದು ಗುಡಿಸಲಿನಿಂದ ದೀಪದ ಮಿಣಿಮಿಣಿ ಬೆಳಕು ಕಾಣಿಸಿತು. ಹೋದ ಜೀವ ಬಂದಂತಾಯಿತು ಅವಳಿಗೆ. ಜೋರಾಗಿ ಒಮ್ಮೆ ಉಸಿರು ಎಳೆದುಕೊಂಡಳು ಒಡನೆಯೆ ಗುಡ್ಡದ ಇಳಿಜಾರಿನಗುಂಟ ದುಡುದುಡು ಓಡುತ್ತ ನಡೆದಳವಳು, ಆ ಗುಡಿಸಲಿನತ್ತ.

ಗುಡಿಸಲಿನ ಬಾಗಿಲು ಸ್ವಲ್ಪ ಓರೆಯಾಗಿ ಇಕ್ಕಲಾಗಿತ್ತು. "ಯಾರಿದ್ದೀರಿ ತಾಯೀ" ಎಂದು ಕೂಗಿ ಬಾಗಿಲನ್ನು ದೂಡಿದಳು ತುಷಾರಮಣಿ. ಬಾಗಿಲು 'ಚರ್' ಎಂದು ತೆರೆಯಿತು, ಆದರೆ ಪ್ರತ್ಯುತ್ತರ ಮಾತ್ರ ಏನೂ ಬರಲಿಲ್ಲ. ಮಣಿ ಒಳಗ ನಡೆದಳು. ಯಾರ ಸುಳಿವೂ ಇರಲಿಲ್ಲ ಒಳಗೆ. ಮಣಿಗೆ ತುಂಬ ಸೋಜಿಗವೆನಿಸಿತು 'ಒಂಟಿಯಾದ ಈ ಗುಡಿಸಲಿನಲ್ಲಿ ರಾತ್ರಿಯಾದರೂ ಯಾರೂ ಇಲ್ಲವಲ್ಲ, ಬರಿದೆ ದೀಪಗಳು ಮಾತ್ರ ಉರಿಯುತ್ತಿವೆ!'

ಅತ್ತಿತ್ತ ಸುತ್ತಲೂ ನೋಡಿದಳು ಮಣಿ. ಗುಡಿಸಲಿನಲ್ಲಿಯು ಎಲ್ಲ ವಸ್ತು-ಒಡವೆಗಳೂ ಅಚ್ಚುಕಟ್ಟಾಗಿವೆ. ಒಂದಡೆ ಒಂದು ದೊಡ್ಡ ಮೇಜಿದೆ. ಅದರ ಮೇಲೆ ಏನೋ ವಸ್ತುಗಳನ್ನಿರಿಸಿ ನವಿರಾದ ಬಟ್ಟೆ ಹೊದಿಸಿದ್ದಾರೆ. ಕುತೂಹಲದಿಂದ ಮಣಿ ಬಟ್ಟೆಯನ್ನು ಸ್ವಲ್ಪ ಮೇಲೆತ್ತಿ ನೋಡಿದಳು. ಪಕ್ವಾನ್ನದ ಘಮಘಮ ವಾಸನೆ ಮೂಗಿಗೆ ಬಡಿಯಿತು. ಪೂರ್ತಿಯಾಗಿ ಬಟ್ಟೆಯನ್ನು ತರೆದು ನೋಡಿದಳು. ಏಳು ಬೆಳ್ಳಿಯ ತಾಟುಗಳಲ್ಲಿ ಪಕ್ವಾನ್ನ ಬಡಿಸಿ ಇರಿಸಲಾಗಿದೆ. 'ಅಬ್ಬಾ! ಹೊರಗಿನಿಂದ ನೋಡಲು ಬರಿ ಬಡವರ ಗುಡಿಸಲಿನಂತೆ ಕಾಣುತ್ತದೆಯಲ್ಲ! ಇದು ಯಾರ ಮನೆ? ಇಷ್ಟೆಲ್ಲ ಊಟದ ತಟ್ಟಗಳು ಯಾರಿಗಾಗಿ?' ಎಂದು ನೂರೆಂಟು ಪ್ರಶ್ನೆಗಳು ಅವಳ ಮನಸಿನಲ್ಲೆದ್ದುವು. ಪಕ್ಕದ ಕೊಟಡಿಯ ಬಾಗಿಲನ್ನು ತೆರೆದು ನೋಡಿದಳು.

ತವ್ಮ್ರ ಅರಮನೆಯಲ್ಲಿ ಇರುವಂತಹ ಏಳು ಮಂಚಗಳಿವೆ ಹಾಸಿಗೆ ಹಾಸಿ ಸಿದ್ಧವಾಗಿವೆ. ಮಣಿಗೆ ಮತ್ತಷ್ಟು ಆಶ್ಚರ್ಯ ವಾಯಿತು ಮನೆಯ ಹೊರಗೆ ಬಂದು ಸುತ್ತಲೆಲ್ಲ ಕಣ್ಣು ಹಾಯಿಸಿದಳು ಎಲ್ಲಿ ನೋಡಿದರೂ ಮೌನ

ಯಾರಾದರೂ ಬರಬಹುದೆಂದು ತುಸು ಹೊತ್ತು ತಡೆದಳು ಆದರೆ ಯಾರೂ ಬರುವ ಲಕ್ಷಣ ತೋರಲಿಲ್ಲ. ಮಣಿಗೂ ತುಂಬ ಹಸಿವೆ, ಬಾಯಾರಿಕೆ, ಬಳಲಿಕೆ-ಎಲ್ಲ ಆಗಿತ್ತು ಮೇಜಿನ ಬಳಿ ಬಂದಳು. ಏನು ತಿನ್ನುವುದು ಎಂದು ಯೋಚಿಸಿದಳು ಲಾಡುಗಳನ್ನೇ ಮೊದಲು ತಿನ್ನುವಾ ಎಂದು ಏಳೂ ತಟ್ಟೆಗಳಿಂದ ಚೂರುಚೂರು ಲಾಡು ತಿಂದಳು. ಅಂತೆಯೇ ಏಳೂ ಬಟ್ಟಲುಗಳಿಂದ ತುಸುತುಸು ಖೀರು ಸುರಿ ದಳು ಅಷ್ಟಕ್ಕೇ ಅವಳಿಗೆ ತೃಪ್ತಿಯೆನಿಸಿತು ಪ್ರತಿಯೊಂದು ಗ್ಲಾಸಿನಿಂದ ಒಂದೊಂದು ಗುಟುಕು ನೀರು ಕುಡಿದಳು. ಮಣಿಯ ಊಟ ಮುಗಿಯಿತು ಕೈ ತೊಳೆದು ಸ್ವಲ್ಪ ಹೊತ್ತು ಕಾದು ಕುಳಿತಳು ಇಷ್ಟಕ್ಕೂ ಯಾರೂ ಬರ ಲಿಲ್ಲ ಅವಳ ಕಣ್ಣುಗಳಲ್ಲಿ ತೂಕಡಿಕೆ ಬಂದಿತು 'ಆಯಿತು, ಇನ್ನು ಮನೆಯವರು ಬೇಕಾದಾಗ ಬರಲಿ' ಎಂದುಕೊಂಡು ಮಲಗುವ ಕೋಣೆಗೆ ಬಂದಳು ಮಣಿ ಮಲಗುವ ಪೂರ್ವ ದಲ್ಲಿ ಯಾವ ಹಾಸಿಗೆ ಮೆತ್ತಗಿದೆ ಎಂದು ನೋಡಬೇಡವೇ? ಎಲ್ಲ ಹಾಸಿಗೆಗಳ ಮೇಲೂ ಹೊರಳಾಡಿ ನೋಡಿದಳು ಕೊನೆಯ ಮಂಚದ ಹಾಸಿಗೆ ಮೆತ್ತಗೆನಿಸಿತು ಅವಳಿಗೆ

' ಉಶ್ ' ಇನ್ನು ಇದರ ಮೇಲೆಯೇ ಮಲಗುತ್ತೇನೆ ಎಂದು ಕೊಂಡಳು ತಾನು ಬಹಳ ದಣಿದುಕೊಂಡಾಗ ಸುಗ್ರಾಸ ಭೋಜನ, ಮೆತ್ತಗಿನ ಮಖಮಲಿನ ಹಾಸಿಗೆ ಇಷ್ಟೆಲ್ಲ ದಯಪಾಲಿಸಿದ್ದಕ್ಕಾಗಿ ದೇವರನ್ನು ಕೊಂಡಾಡಿ, ಸ್ಮರಿಸಿ, ನಮಿಸಿದಳು ತುಷಾರಮಣಿ ಸುಖವಾಗಿ ಮಲಗಿಬಿಟ್ಟಳು.

ಒಂದೆರಡು ಗಂಟೆಗಳ ನಂತರ ಆ ಗುಡಿಸಲಿನ ಒಡೆಯರು ಒಬ್ಬೊಬ್ಬರಾಗಿ ಬಂದರು ಅವರು ಏಳೂ ಜನ ಗಂಡಸರೇ ಒಬ್ಬರಿಗಿಂತ ಒಬ್ಬರು ವಾಮನ ಮೂರ್ತಿಗಳು— ಕುಳ್ಳರು, ಗುಜ್ಜಾರಿಗಳು. ಗುಡ್ಡ ಗುಡ್ಡ ಅಲೆದು, ಬಂಗಾರದ ಗಣಿಗಳನ್ನು ಹುಡುಕುತ್ತ, ಅದರಲ್ಲಿನ ಬಂಗಾರವನ್ನು ಸೋಸಿ ಹೊರಗ ತೆಗೆಯುವುದೇ ಅವರ ಉದ್ಯೋಗವಾಗಿತ್ತು ಇದರಿಂದ ಗುಜ್ಜಾರಿಗಳು ವಿಪುಲ ಸಂಪತ್ತಿಯನ್ನು ಗಳಿಸಿದ್ದರು ಹಿರಿಯ ಗುಜ್ಜಾರಿ ಬಂದು ದೀಪವನ್ನು ದೊಡ್ಡದು ಮಾಡಿದ ನೋಡುತ್ತಾರೆ, ಎಲ್ಲವೂ ಅಸ್ತವ್ಯಸ್ತ. ತಿಂಡಿ-ಪದಾರ್ಥಗಳ ಮೇಲೆ ಮುಚ್ಚಿದ್ದ ಅಂಗವಸ್ತ್ರ ಪೂರ್ತಿ ತೆರೆದುಹೋಗಿದೆ

"ಇದೋ, ನನ್ನ ಬಟ್ಟಲಿನಲ್ಲಿಯ ಖೀರು ಅರ್ಧ ಕರಗಿ ಹೋಗಿದೆ "—ಎಂದೊಬ್ಬ ಗುಜ್ಜಾರಿ ಹೇಳಿದ.

" ಎಲಾ, ನನ್ನ ಲಾಡುವಿನಲ್ಲಿಯೂ ಕೊಂಚ ಭಾಗ ಯಾರೋ ಮುರಿದುಕೊಂಡಿದ್ದಾರಲ್ಲ " ಇನ್ನೊಬ್ಬ ಗುಜ್ಜಾರಿ ಹೇಳಿದ.

"ನನ್ನ ಗ್ಲಾಸಿನ ನೀರಿಗೂ ಯಾರೋ ಕೈ ಹಚ್ಚಿ ದಂತಿದೆ" ಎಂದು ಚಿಕ್ಕ ಗುಜ್ಜಾರಿ ಗೊಣಗುಟ್ಟಿದ

"ಯಾರಾದರೂ ನಮ್ಮ ಮನೆಹೊಕ್ಕು ಹೋಗಿರಲೇ ಬೇಕು ಏಕೆಂದರೆ ಇಂಥ ಅವ್ಯವಸ್ಥೆ ಇಂದಿಗೂ ನಡೆದಿರ ಲಿಲ್ಲ" ಎಂದು ದೊಡ್ಡ ಗುಜ್ಜಾರಿ ಸಂಶಯ ದೃಷ್ಟಿಯಿಂದ ಸುತ್ತಲೂ ನೋಡಿದ ಹಾಗೆಯೇ ಮಲಗುವ ಕೋಟಿಡಿಯಲ್ಲಿ ಇಣಿಕಿ ನೋಡಿದ.

"ಇದೋ ನೋಡಿ, ನನ್ನ ಹಾಸಿಗೆಯಲ್ಲಿ ಯಾರೋ ಹೊರಳಾಡಿ ಹೋದಂತಿದೆ ನೋಡಿದಿರಾ, ಮೇಲು ಹಾಸಿಗೆ, ಹೊದ್ದಿಕೆಗಳೆಲ್ಲ ಎಷ್ಟು ಸುಕ್ಕುಸುಕ್ಕಾಗಿಹೋಗಿವೆ!" ಎಂದು ಕೂಗಿ ಹೇಳಿದ ದೊಡ್ಡ ಗುಜ್ಜಾರಿ ಎಲ್ಲ ಗುಜ್ಜಾರಿಗಳೂ ಕೋಣೆಗೆ ಬಂದು ತಮ್ಮ ತಮ್ಮ ಹಾಸಿಗೆಯನ್ನು ನೋಡಿ ಕೊಳ್ಳಹತ್ತಿದರು ಎಲ್ಲರ ಹಾಸಿಗಯೂ ಮುದ್ದೆ-ಮುದ್ದೆ

"ಇಲ್ಲಿ ನೋಡಿ—ನನ್ನ ಹಾಸಿಗೆಯ ಮೇಲೆ ಒಂದು ಚಿಕ್ಕ ಹುಡುಗಿ ಮಲಗಿಕೊಂಡಿದೆ ಬನ್ನಿ ಶಶ್! ಶಬ್ದ ಮಾಡಬೇಡಿ. ಪಾಪ! ಹುಡುಗಿ ಮಲಗಿಕೊಂಡಿದೆ" ಎಂದು ಎಲ್ಲಕ್ಕೂ ಕಿರಿಯ ಗುಜ್ಜಾರಿ ಎಲ್ಲರನ್ನೂ ಹತ್ತಿರಕ್ಕೆ ಕರೆದ.

ಎಲ್ಲರೂ ಬಹಳ ಕುತೂಹಲದಿಂದ ಕೈಲಿ ಒಂದೊಂದು ದೀಪ ಹಿಡಿದುಕೊಂಡು ಆ ಮಂಚದ ಸುತ್ತಲೂ ನೆರೆದರು ನೋಡುತ್ತಾರೆ, ಏನೂ ಅರಿಯದ ಚಿಕ್ಕ ಬಾಲೆ ಸುಖವಾಗಿ ಮಲಗಿದ್ದಾಳೆ ಅವಳ ಮುಗ್ಧ-ಸುಂದರ ಮುಖವನ್ನು ಕಂಡು

ಎಲ್ಲರಿಗೂ ಆನಂದವೆನಿಸಿತು "ಮಗು ಎಷ್ಟು ಚೆಲುವಾಗಿದೆ!" ಎಂದು ಗುಜ್ಜಾರಿಗಳು ತಮ್ಮ ತಮ್ಮಲ್ಲಿ ಮಾತನಾಡಿ ಕೊಂಡರು. "ಪಾಪ ! ಸದ್ಯ ಅವಳು ಸುಖವಾಗಿ ಮಲಗಲಿ ಬನ್ನಿ. ಅವಳ ನಿದ್ದೆ ಕೆಟ್ಟೀತು ನಾಳೆ ಬೆಳಿಗ್ಗೆ ಎಸೆಲ್ಲ ವಿಚಾರಿಸೋಣ" ಎಂದು ಹಿರಿಯ ಗುಜ್ಜಾರಿ ಅವರನ್ನೆಲ್ಲ ಹೊರಗೆ ಕರೆದ ಗುಜ್ಜಾರಿಗಳೆಲ್ಲ ಊಟ ತೀರಿಸಿಕೊಂಡು, ಹಾಗೂ ಹೀಗೂ ಆ ಆರು ಹಾಸುಗೆಗಳಲ್ಲಿ ಮುದುರಿ ಕೊಂಡು ಮಲಗಿದರು

ಬೆಳಗಾಯಿತು ತುಷಾರಮಣಿ ನಿದ್ದೆ ತಿಳಿದು ಎದ್ದಳು ವಿಚಿತ್ರ ಗುಜ್ಜಾಗಳನ್ನು ಕಂಡು ಅವಳಿಗೆ ಭಯವಾಯಿತು. ಮತ್ತೆ ಎಂಥ ಆಪತ್ತು ಬರುವುದೋ ಎಂದು ನಡುಗಿದಳು ಆದರೆ ಅವಳ ಊಹೆ ತಪ್ಪಾಯಿತು ಗುಜ್ಜಾರಿಗಳು ತುಂಬ ಒಳ್ಳೆಯವರು "ಮಗೂ, ಹೇಗಮ್ಮ ನೀನಿಲ್ಲಿಗೆ ಬಂದ? ನೀನು ಯಾರು?" ಎಂದು ಒಳ್ಳೆ ಪ್ರೀತಿಯಿಂದ ಕೇಳಿ ದರು—ಗುಜ್ಜಾರಿಗಳು

ಮಣಿಗೆ ಧೈರ್ಯ ಬಂದಿತು ತನ್ನ ಮಲಅಮ್ಮನ ದುಷ್ಟಬುದ್ಧಿಯ ಕಥೆಯನ್ನು ಅವರಿಗೆ ಹೇಳಿದಳು ತಾನು ಇನ್ನೆಂದಿಗೂ ಅರಮನೆಗೆ ಹೆಜ್ಜೆ ಹಾಕುವುದಿಲ್ಲ ಎಂಬುದನ್ನೂ ತಿಳಿಸಿದಳು

"ನಿನ್ನ ಹೆಸರೇನು?"—ಹಿರಿಯ ಗುಜ್ಜಾರಿ ಕೇಳಿದ.

"ತುಷಾರಮಣಿ!"

" ಎಂಥ ಚೆಲುವಾದ ಹೆಸರು ಹೆಸರಿಗೆ ತಕ್ಕಂಥ ಹುಡುಗಿ ನೀನು. ನೀನೇನೂ ಚಿಂತಿಸಬೇಡ ನೀನು ನಮ್ಮಲ್ಲಿಯೇ ಇದ್ದುಬಿಡು ನಮಗಾಗಿ ಸ್ವಲ್ಪ ಅಡಿಗೆ ಮಾಡು ನಾವು ಬಂದಮೇಲೆ ನಮಗೆ ಊಣಬಡಿಸು. ಆಯಿತು ನಿನ್ನ ಕೆಲಸ ಉಳಿದ ಸಮಯದಲ್ಲಿ ಮನೆಯುಲ್ಲಿಯೇ ಆಡಿಕೊಂಡಿರು ಒಪ್ಪಿಗೆ ತಾನೆ ? "

ತುಷಾರಮಣಿ ಇದನ್ನು ಸಂತೋಷದಿಂದ ಒಪ್ಪಿಕೊಂಡಳು

" ನಿನ್ನ ಮಲಅಮ್ಮ ನಿನ್ನನ್ನು ಕೊಲ್ಲಲು ಹುಡುಕಿಕೊಂಡು ಬರಬಹುದು. ನೀನು ಮಾತ್ರ ಮನೆಯಲ್ಲಿ ಯಾರನ್ನೂ ಬರಗೊಡಬೇಡ, ತಿಳಿಯಿತೆ ಯಾರ ದೃಷ್ಟಿಗೂ ನೀನು ಬೀಳಬೇಡ " ಎಂದು ಮಣಿಯನ್ನು ಎಚ್ಚರಿಸಿ ಗುಜ್ಜಾರಿಗಳು ಬಂಗಾರದ ಗಣಿಗೆ ಹೊರಟುಹೋದರು.

## ೨

ಇತ್ತ ಕೊಲೆಗಡಕ ಮರಳಿ ಬಂದು ತಾನು ತುಷಾರಮಣಿಯನ್ನು ಕೊನೆಗಾಣಿಸಿದೆನೆಂದು ರಾಣಿಗೆ ಹೇಳಿಬಿಟ್ಟನು. ರಾಣಿಗೆ ಆನಂದವಾಯಿತು. " ಇನ್ನೇನು, ನಾನೇ ಊರ್ವಶಿ, ನಾನೇ ರಂಭೆ ನನಗಿಂತ ಚೆಲುವೆಯರು ಈ ಪ್ರಪಂಚ

ದಲ್ಲಿಯೇ ಇಲ್ಲ" ಎಂದು ಹಿರಿಹಿರಿ ಹಿಗ್ಗಿದಳು ಆಕೆ. ಹೀಗೆಯೇ ಅನೇಕ ದಿನಗಳು ಕಳೆದುಹೋದುವು

ಒಂದು ದಿನ ರಾಣಿ ಅಕಸ್ಮಾತ್ತಾಗಿ ತನ್ನ ಮಾಯದ ಕನ್ನಡಿಯನ್ನು ನೋಡಿದಳು ಒಳ್ಳೆ ಹೆಮ್ಮೆಯಿಂದ ಕನ್ನಡಿಯನ್ನು ಕೇಳಿದಳು, "ನಚ್ಚಿನ ಕನ್ನಡಿಯೇ, ಇಂದಾದರೂ ಹೇಳು ಈ ಜಗತ್ತಿನಲ್ಲಿ ನಾನೇ ಅತಿ ಸುಂದರಿಯಲ್ಲವೇ?"

"ನಿನ್ನಷ್ಟಕ್ಕೆ ನೀನು ಸುಂದರಿ ನಿಜ ಆದರೆ ಪ್ರಪಂಚದಲ್ಲಿ ನಿನ್ನನ್ನೂ ಮೀರಿಸುವ ಒಬ್ಬ ಚೆಲುವೆ ಇದ್ದಾಳೆ. ಅರಣ್ಯ ದಾಟಿ, ಒಂದು ಬೆಟ್ಟದ ಕೆಳಗಿನ ಗುಡಿಸಲಿನಲ್ಲಿ ಅವಳು ವಾಸವಾಗಿದ್ದಾಳೆ ಆಕೆ ಯಾರು ಗೊತ್ತೇ? ತುಷಾರಮಣಿ" ಎಂದು ಮಾಯದ ಕನ್ನಡಿ ಹೇಳಿ ಕಿಲಕಿಲನೆ ನಕ್ಕಿತು

ರಾಣಿ ಸಿಟ್ಟಿನಿಂದ ಹುಚ್ಚೆದ್ದಳು "ಕೃತಘ್ನ ಸುಳ್ಳು ಸುಳ್ಳೇ 'ಮಣಿಯನ್ನು ಕೊಂದೆನ'ಂದು ಹೇಳಿ ದುಡ್ಡು ಗಿಟ್ಟಿಸಿದ" ಎಂದು ಕೊಲೆಗಡಕನನ್ನು ಬಹುವಾಗಿ ಶಪಿಸಿದಳು ಇನ್ನು ಹೀಗೆಲ್ಲ ಬೇರೆಯವರಿಗೆ ಈ ಕೆಲಸ ಹೇಳಿದರೆ ಆಗದು. ತಾನೇ ಸ್ವತಃ ಆ ತುಷಾರಮಣಿಯನ್ನು ಹುಡುಕಿ ಕೊಂದುಹಾಕಬೇಕು ಎಂದು ಸಂಕಲ್ಪ ಮಾಡಿದಳು.

ತನ್ನ ಚಾಕರರನ್ನು ಕಳಿಸಿ, ತುಷಾರಮಣಿ ವಾಸಿಸುವ ತಾವನ್ನು ರಾಣಿ ತಿಳಿದುಕೊಂಡಳು ಅದು ಸನಿಹದಲ್ಲೇ

ಇತ್ತು, ಮೂರು ಮೈಲು ದೂರದಲ್ಲಿ. ತಾನೇ ಸ್ವತಃ ಒಬ್ಬ ಬೊಂಬೆ ಮಾರುವವನ ವೇಷ ಹಾಕಿಕೊಂಡು ಹೋಗಿ, ತುಷಾರಮಣಿಯನ್ನು ತೀರಿಸಿಬಿಡಬೇಕೆಂದು ತೀರ್ಮಾನಿಸಿದಳು

ತಲೆಗೆ ಪೇಟ ಸುತ್ತಿ, ಮೈಗೆ ಸಡಿಲಾದ ಉದ್ದ ತೋಳಿನ ಅಂಗಿ ತೊಟ್ಟು, ಇಜಾರ ಧರಿಸಿಕೊಂಡಳು ರಾಣಿ ಮುಖಕ್ಕೆ ಬಣ್ಣ ಬಳಿದುಕೊಂಡು ಗುರುತು ಸಿಕ್ಕದಂತಾದಳು. ಮೇಲಾಗಿ ಸ್ವಲ್ಪ ಕಂಬಳಿಯ ಕರಿಗಳನ್ನು ಕತ್ತಿ ಗಡ್ಡ ಹಚ್ಚಿಕೊಂಡಳು ಕನ್ನಡಿಯಲ್ಲಿ ನೋಡಿಕೊಂಡಳು ಹದಿನಾರಾಣೆ ಬೊಂಬೆ ವ್ಯಾಪಾರಿಯ ವೇಷ ಇನ್ನು ಮಾರುವ ಒಡವೆಗಳು ಬೇಕಲ್ಲ ಪೇಟೆಯಿಂದ ಅಂದಅಂದದ ಆಟಿಗೆ-ಬೊಂಬೆ, ರಿಬ್ಬನು ತರಿಸಿದಳು ಒಂದು ಜೋಳಿಗೆಯಲ್ಲಿ ಅವನ್ನೆಲ್ಲ ಹಾಕಿಕೊಂಡು ತುಷಾರಮಣಿ ಇರುವ ತಾವಿಗೆ ಹೊರಟಳು

ಮಣಿ ಇರುವ ಮನೆ ಬಾಗಿಲು ಇಕ್ಕಿತ್ತು, ಒಳಗಿನಿಂದ ಅಗುಳಿ ಹಾಕಿತ್ತು. ಅವಳು ಒಳಗೆ ಇರಬೇಕೆಂದು ಎನಿಸಿತು ಬೊಂಬೆ ಮಾರುವ ವೇಷಗಾರ್ತಿಗೆ. "ಬೊಂಬೆ ಬೇಕೇನಮ್ಮ ಬೊಂಬೆ. ಬಣ್ಣಬಣ್ಣದ ರಿಬ್ಬನು ಬೇಕೇ ರಿಬ್ಬನು" ಎಂದು ಚೆನ್ನಾಗಿ ಕೇಳಿಸುವಂತೆ ಕೂಗಿದನು ದಕ್ಷ ವ್ಯಾಪಾರಿ

'ರಿಬ್ಬನು' ಎಂಬ ಶಬ್ದ ಕೇಳಿದ ಕೂಡಲೆ ತುಷಾರ

ಮಣಿಗೆ ಅದು ತನಗೆ ಬೇಕೇಬೇಕೆಂದು ಮನಸ್ಸಾಯಿತು. ಕಿಟಕಿಯಿಂದ ಹೊರಗೆ ಇಣುಕಿದಳು. ಗಡ್ಡದ ಬೊಂಬೆಯ ವ್ಯಾಪಾರಿ ‘ ಇವನೋ ಒಬ್ಬ ಚಿಲ್ಲರೆ ವ್ಯಾಪಾರಿ ಇವನೇನೂ ನನಗೆ ಅಪಾಯ ಮಾಡಲಾರ’ ಎಂದಂದುಕೊಂಡು ತುಷಾರ ಮಣಿ ಬಾಗಿಲು ತರದಳು “ ಬೊಂಬೆಯವನೇ, ಇಲ್ಲಿ ಬಾ ನನಗೊಂದು ಒಳ್ಳೆಯ ನೀಲಿ ಬಣ್ಣದ ರಿಬ್ಬನು ತಾ ಬಣ್ಣ ಮಾತ್ರ ಹೋಗಬಾರದು” ಎಂದು ಅವನನ್ನು ಕರೆದು ಹೇಳಿದಳು

‘ ಅದಕ್ಕೇನು ಒಳ್ಳೆ ಚೆನ್ನಾದ್ದನ್ನೇ ಕೊಡುತ್ತೇನೆ ’ ಎಂದು ತನ್ನ ಜೋಳಿಗೆಯಿಂದ ಒಂದು ನೀಲಿ ಬಣ್ಣದ ರಿಬ್ಬನು ಹೊರತೆಗೆದ ಆ ಕಿರುಕುಳ ವ್ಯಾಪಾರಿ ಅದರ ಬಣ್ಣವನ್ನು ನೋಡಿಯೇ, ‘ ಬಹಳ ಚೆನ್ನಾಗಿದೆ ’ ಎಂದು ಹರುಷದಿಂದ ಹೇಳಿದಳು ಮಣಿ

“ ನೋಡಮ್ಮ ನಿನಗೆ ಹೇಗೆ ಒಪ್ಪುತ್ತದೆ” ಎನ್ನುತ್ತ ಅವಳ ಕೂದಲಿನ ಹತ್ತಿರ ರಿಬ್ಬನನ್ನು ಹಿಡಿದ ವ್ಯಾಪಾರಿ.

“ ಹೌದು. ಚಲೋ ಇದೆ ನನಗೆ ಹಿಡಿಸಿತು” ಎಂದಳು ಮಣಿ

ಹಠಾತ್ತಾಗಿ ವೇಷಧಾರಿಯಾದ ರಾಣಿ ಆ ರಿಬ್ಬನಿನಿಂದ ಅವಳ ಕುತ್ತಿಗೆಯನ್ನು ಬಿಗಿದಳು. ಅದು ಉರುಲು ಹಾಕಿದಂತಾಯಿತು. ತುಷಾರಮಣಿಯ ಉಸಿರು ಕಟ್ಟಿ ಹೋಯಿತು. ಅವಳು ಎಚ್ಚರುದಪ್ಪಿ ನೆಲಕ್ಕೆ ಉರುಳಿದಳು.

ಉಸಿರಾಟವಿಲ್ಲದೆ, ಅಲುಗಾಡದೆ ಬಿದ್ದುದನ್ನು ನೋಡಿ, ಅವಳು ಸತ್ತೇಹೋದಳೆಂದು ಮನಗಂಡು ರಾಣಿ ಆನಂದ ದಿಂದ ತನ್ನ ಅರಮನೆಗೆ ಹೊರಟುಹೋದಳು

ಇಡಿ ದಿನ ಹಾಗೆಯೇ ಎಚ್ಚರಿಲ್ಲದೆ ಮಣಿ ಬಿದ್ದು ಕೊಂಡಿದ್ದಳು ರಾತ್ರಿ ಏಳೆಂಟು ಗಂಟೆಗ ಗುಜ್ಜಾರಿ ಸೋದ ರರು ಮನೆಗೆ ಮರಳಿ ಬಂದರು ನೋಡುತ್ತಾರೆ, ಮಣಿ ಬಾಗಿಲಲ್ಲಿ ಬಿದ್ದುಕೊಂಡಿದ್ದಾಳ. ಅವಳನ್ನೆತ್ತಿ ಒಳಗ ಒಯ್ದು ಹಾಸಿಗೆಯ ಮೇಲ ಮಲಗಿಸಿದರು ದೀಪ ಹಚ್ಚಿ ಅವಳ ಮುಖಕ್ಕೆ ಹಿಡಿದರು ರಿಬ್ಬನಿನಿಂದ ಯಾರೋ ಉರುಲು ಹಾಕಿದ್ದಾರೆ ! ಒಡನೆಯೇ ಒಬ್ಬ ಗುಜ್ಜಾರಿ ಅದನ್ನು ಚಾಕು ವಿನಿಂದ ಕೊಯ್ದು ತೆಗದ. ಈಗ ತುಷಾರಮಣಿ ಚೆನ್ನಾಗಿ ಉಸಿರಾಡುವಂತಾಯಿತು ಕಲ ಹೊತ್ತಿನ ಮೇಲ ಅವ ಳಿಗೆ ಪ್ರಜ್ಞೆ ಬಂತು ನಿದ್ದೆ ತಿಳಿದು ಎದ್ದವರಂತ ಕಣ್ಣು ತೆರೆದು ಮೈ ಮುರಿದಳು, ಆಕಳಿಸಿದಳು. " ಇದೇನು ನಿನ್ನ ಸ್ಥಿತಿ ? " ಎಂದು ಗುಜ್ಜಾರಿಗಳು ಕೇಳಲು ನಡೆದ ಸಂಗತಿ ಯನ್ನು ಹೇಳಿದಳು ಬೊಂಬೆ ಮಾರುವವನ ವೇಷದಲ್ಲಿ ಬಂದವಳು ರಾಣಿಯೇ ಎಂಬುದು ಗುಜ್ಜಾರಿಗಳಿಗೆ ಖಚಿತ ವಾಯಿತು

" ಈಗಲಾದರೂ ಬುದ್ಧಿ ಬಂತಲ್ಲ. ಇನ್ನು ಯಾರನ್ನೂ ಗುಡಿಸಲಿನಲ್ಲಿ ಕರೆಯಬೇಡ, ಬರಗೊಡಬೇಡ " ಎಂದು ಹಿರಿಯ ಗುಜ್ಜಾರಿ ಮಣಿಗೆ ಎಚ್ಚರಿಕೆ ಕೊಟ್ಟನು.

೩

ತುಷಾರಮಣಿ ಸತ್ತುಹೋದಳೆಂದು ತಿಳಿದು ರಾಣಿ ಸಂತೋಷದಿಂದ ಅರಮನೆಗೆ ಬಂದು ಹಾಯಾಗಿ ಇದ್ದು ಬಿಟ್ಟಳು ಕಲವು ದಿನಗಳ ನಂತರ ಮತ್ತೆ ಮಾಯದ ಕನ್ನಡಿಯನ್ನು ಮಾತನಾಡಿಸಿದಳು. ಕನ್ನಡಿ ಮತ್ತೆ ಮೊದಲಿ ನಂತಯೇ ಉತ್ತರ ಕೊಟ್ಟಿತು 'ತುಷಾರಮಣಿಯೇ ನಿನ ಗಿಂತ ಚೆಲುವೆಯಾಗಿದ್ದಾಳೆ. ದೈವಾನುಕೂಲದಿಂದ ಅವಳು ಸತ್ತು ಬದುಕಿದ್ದಾಳೆ' ರಾಣಿ ಕಿಡಿಕಿಡಿಯಾದಳು ತುಷಾರ ಮಣಿ ಬದುಕಬಹುದೆಂದು ಅವಳು ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ ಹಾಗಾದರೆ ಈಸಲವಾದರೂ ಅವಳನ್ನು ಪೂರ್ತಿಯಾಗಿ ಮುಗಿಸಿಬಿಡಬೇಕೆಂದು ನಿರ್ಧಾರ ಮಾಡಿ ದಳು ಆಕೆ

ಮತ್ತೆ ರಾಣಿ ವೇಷ ಕಟ್ಟಿದಳು ಆದರೆ ಮೊದಲಿ ನಂತೆ ಅಲ್ಲ, ಬೇರೆ ತರಹ ಕೆಂಪು ಲುಂಗಿ ಸುತ್ತಿಕೊಂಡಳು, ರೇಶ್ಮೆಯ ಅಂಗಿ ತೊಟ್ಟು, ತಲೆಗೆ ಉಣ್ಣೆಯ ಟೊಪ್ಪಿಗೆ ಹಾಕಿಕೊಂಡಳು ಕಾಣಲು ಲಂಬಾಣಿ ವ್ಯಾಪಾರಿಯಂತೆಯೇ. ಅವನು ಈಸಲ ಹಣಿಗೆಯ ವ್ಯಾಪಾರಕ್ಕೆ ಹೊರಟ. ಕೋಡು, ಗಂಧದ ಕಟ್ಟಿಗೆ, ಕರ್ಪೂರ ಮೊದಲಾದವುಗಳ ಅಂದವಾದ ಹಣಿಗೆಗಳನ್ನು ಜೊತೆಗೆ ತೆಗೆದುಕೊಂಡ. ಆದರೇನು ಎಲ್ಲವಕ್ಕೂ ವಿಷವನ್ನು ತೊಡೆದಿದ್ದ. ತುಷಾರ ಮಣಿ ಇರುವ ಗುಡಿಸಲಿಗೆ ಬಂದು ಕೂಗಿದ. ಬಾಗಿಲು,

ಕಿಟಕಿ ಎಲ್ಲಾ ಮುಚ್ಚಿದ್ದುವು ಬಾಗಿಲ ಅಗಳಿ ಒಳಗಿನಿಂದ ಹಾಕಿದ್ದಿತು ಮಣಿ ಒಳಗ ಅವಿತುಕೊಂಡಿದ್ದಾಳೆಂಬುದು ರಕ್ಕ ವ್ಯಾಪಾರಿಗೆ ತಿಳಿಯಿತು "ಹಣಗ ತಂದಿದೇನಮ್ಮಾ, ಹಣಿಗೆ" ಎಂದು ಗಟ್ಟಿಸಿ ಕೂಗಿದಳು. "ಎಲೆ ರಕ್ಕ, ಈ ಹೊತ್ತು ನಾನು ನಿನ್ನನ್ನು ಒಳಗ ಬರಗೊಡುವು



ದಿಲ್ಲ" ಎಂದು ಕಿಟಕಿಯನ್ನು ತುಸು ಓರೆಮಾಡಿ ಕೂಗಿ ಹೇಳಿದಳು ಮಣಿ ಆದರೆ ವ್ಯಾಪಾರಿ ತನ್ನ ಛಲವನ್ನು ಬಿಡಲಿಲ್ಲ. ಬಣ್ಣ ಬಣ್ಣದ ಮಾತನಾಡಿದ. ಇಂಥ ಹಣಿಗೆಗಳು ರಾಜಪುತ್ರಿಯರಿಗೆ ಕೂಡ ಸಿಕ್ಕುವುದು

ಅಸಂಭವ ಎಂದು ತಾನು ತಂದ ಹಣಿಗೆಗಳ ಶಿಫಾರಸು ಮಾಡಿದ

ಎಷ್ಟೆಂದರೂ ತುಷಾರಮಣಿ ಚಿಕ್ಕ ಹುಡುಗಿ ಬಣ್ಣದ ಹಣಿಗೆಯ ಮೇಲೆ ಅವಳಿಗೆ ಆಸೆಯಾಯಿತು ಅರ್ಧ ಕಿಟಕಿ ತೆರೆದು ನೋಡಿದಳು ಈಸಲ ಬಂದ ವ್ಯಾಪಾರಿಯೇ ಬೇರೆಯವನು, ಮೊದಲಿಗೆ ಬಂದವನು ಅಲ್ಲವೇ ಅಲ್ಲ. ಮಾತು-ಕತೆ ಕೇಳಿದರಂತೂ ಒಳ್ಳೆಯ ಮನುಷ್ಯನಂತ ತೋರುತ್ತಾನೆ ಹೀಗೆಂದುಕೊಂಡವಳೇ ಮಣಿ ಅವನನ್ನು ಮನೆಯೊಳಕ್ಕೆ ಕರೆದಳು. ಒಳಗೆ ಬಂದು ಜೋಳಿಗೆಯನ್ನು ಬಿಚ್ಚಿದನು. ಅವಳಿಗೆ ಸ್ವಲ್ಪವೂ ಸಂಶಯ ಬರಬಾರದೆಂದು ಮೇಲಿಟ್ಟಿದ್ದ ಒಂದು ವಿಷವಿಲ್ಲದ ಹಣಿಗೆಯಿಂದ ಅವನು ತನ್ನ ಕೂದಲನ್ನು ಬಾಚಿಕೊಳ್ಳುತ್ತ, 'ಇದೋ ನೋಡಮ್ಮಾ, ಕೂದಲು ಎಷ್ಟು ಚೆನ್ನಾಗಿ ಬಾಚಿಕೊಳ್ಳುತ್ತವೆ' ಎಂದು ಹೇಳಿದ. "ನೀನೂ ಬಾಚಿಕೊಂಡು ನೋಡಮ್ಮಾ, ಬೇಕಾದರೆ ಯಾವುದು ಸರಿ ಹೋಗುತ್ತದೆಯೋ ಅದನ್ನೇ ತೆಗೆದುಕೊಳ್ಳುವೆಯಂತೆ" ಎಂದು ಮಣಿಗೆ ಉಪದೇಶ ಮಾಡಿದ.

'ಅದೇ ಸರಿ' ಎಂದು ತುಷಾರಮಣಿ ಒಂದು ಚೆಲುವಾದ ಹಣಿಗೆಯನ್ನು ಆ ರಾಶಿಯಿಂದ ಹೆಕ್ಕಿಕೊಂಡಳು, ಕೂದಲು ಬಾಚುವುದಕ್ಕಾಗಿ. ಹಣಿಗೆಯನ್ನು ತಲೆಗೆ ತೀಡಿಕೊಂಡಳು. ತೀಡುವುದೊಂದೇ ತಡ, ವಿಷದಿಂದ ಬವಳಿ ಬಂದು ಬಿದ್ದುಬಿಟ್ಟಳು. ಕಲ್ಲಿನಂತೆ ಅಚಲಳಾದಳು. "ವಿಷ

ಪ್ರಯೋಗದಿಂದ ಮನುಷ್ಯ ಬದುಕುವುದುಂಟೇ?—ಸಾಧ್ಯವೇ ಇಲ್ಲ" ಎಂದು ಯೋಚಿಸಿ ರಾಣಿ ತನ್ನ ಹಾದಿ ಹಿಡಿದಳು. ಅಂತೂ ಈ ಸಲ ತನ್ನ ಪ್ರಯತ್ನ ಸಫಲವಾಯಿತಲ್ಲ ಎಂದು ರಾಣಿ ಆನಂದಪರವಶಳಾದಳು.

ಸಂಜೆಯಾಯಿತು ಕೆಲಸ ತೀರಿಸಿಕೊಂಡು ಗುಜ್ಜಾರಿಗಳು ಬಂದರು ಬಾಗಿಲಲ್ಲೇ ತುಷಾರಮಣಿ ಬಿದ್ದುಕೊಂಡದ್ದನ್ನು ನೋಡಿ, ಈ ಸಲವೂ ಆ ದುಷ್ಟರಾಣಿ ಬಂದು ಹೋಗಿರಬೇಕೆಂದು ಅವರು ಗ್ರಹಿಸಿದರು ಬಾಚಣಿಕೆ ಕೂದಲಲ್ಲಿ ಸಿಕ್ಕಿಕೊಂಡಿತ್ತು ಕಿರಿಯ ಗುಜ್ಜಾರಿ ಅದನ್ನು ಕೂದಲಿನಿಂದ ಬಿಡಿಸಿ ತಗೆದ ಚೇಳು ಕುಟುಕಿದರ, ತಿಕ್ಕಿದ ಕೂಡಲೆ ವಿಷ ಇಳಿಸುವ ಒಂದು ದಿವ್ಯೌಷಧಿ ಗುಜ್ಜಾಗಳ ಬಳಿ ಇತ್ತು ಹಿರಿಯ ಗುಜ್ಜಾರಿ ಅದನ್ನೇ ಸ್ವಲ್ಪ ಹಚ್ಚಿದ, ಅವಳ ನೆತ್ತಿಗೆ. ಕೊಂಚ ಹೊತ್ತಿನಲ್ಲಿ ಮಣಿ ಮೂರ್ಛೆ ತಿಳಿದು ಎದ್ದು ಕುಳಿತಳು. ನಡೆದ ವೃತ್ತಾಂತವನ್ನೆಲ್ಲ ಗುಜ್ಜಾರಿಗಳಿಗೆ ಹೇಳಿದಳು. ಚಿಕ್ಕ ಮಗು! ಹೇಳುತ್ತಾ ಹೇಳುತ್ತಾ ಕಣ್ಣೀರು ತಂದುಕೊಂಡಳು ಗುಜ್ಜಾರಿಗಳು ಮಣಿಗೆ ಸಮಾಧಾನ ಹೇಳಿದರು. 'ಇನ್ನು ಮೇಲೆ ಜಾಗ್ರತೆಯಾಗಿ ಇರಮ್ಮ' ಎಂದು ಎಚ್ಚರಿಕೆ ಕೊಟ್ಟರು.

೪

ಹೀಗೆಯೇ ಎಷ್ಟೋ ದಿನಗಳು ಕಳೆದುಹೋದುವು ರಾಣಿ ಒಂದು ದಿನ ಮಾಯದ ಕನ್ನಡಿಯನ್ನು ಮತ್ತೆ ಕೇಳಿದಳು “ಇನ್ನಾದರೂ ಹೇಳು ನಾನು ಎಲ್ಲರಿಗಿಂತ ಸುಂದರಿಯೋ ಅಲ್ಲವೋ?”

“ಸಾಧ್ಯವೇ ಇಲ್ಲ ತುಷಾರಮಣಿಯಷ್ಟು ಚೆಲುವೆ ನೀನಲ್ಲವೇ ಅಲ್ಲ ಅವಳು ಜೀವಿಸಿರುವವರೆಗೆ ಅದು ಹೇಗೆ ನೀನು ಹೆಚ್ಚಿನವಳಾಗುವೆ?” ಎಂದು ಮಾಯದ ಕನ್ನಡಿ ನಗುನಗುತ್ತ ಹೇಳಿತು

ರಾಣಿಯ ಕೋಪ ಅಷ್ಟಿಷ್ಟಲ್ಲ ‘ಈ ಚಾಂಡಾಲಿ ವಿಷದಿಂದಲೂ ಸಾಯಲಿಲ್ಲವೆ? ನೋಡಿಯೇ ಬಿಡುವೆ ಇದೊಂದು ಸಲ. ಇಲ್ಲ ನಾನು ಸಾಯಬೇಕು, ಅಥವಾ ಅವಳನ್ನು ಕೊಲ್ಲಬೇಕು. ಎರಡರಲ್ಲಿ ಒಂದು ನಡೆಯಲೇ ಬೇಕು” ಎಂದು ತೀರ್ಮಾನಿಸಿದಳು. ಸಿಟ್ಟಿನಿಂದ ಸರ್ಪಿಣಿಯಾಗಿದ್ದಳು ಆಕೆ.

ಈ ಸಲ ಅವಳು ಒಬ್ಬ ರೈತನಂತೆ ವೇಷ ಹಾಕಿದಳು ತಲೆಗೆ ರುಮಾಲು, ಅಂಗಿ, ಧೋತರ, ಕಾಲಲ್ಲಿ ದಪ್ಪ ಅಟ್ಟೆಯ ಕೆರ, ಹೆಗಲ ಮೇಲೊಂದು ಕಂಬಳಿ, ದಟ್ಟವಾದ ಕಲ್ಲೀಮೀಸೆ. ಪಕ್ಕಾ ಬಯಲು ಸೀಮೆಯ ಒಕ್ಕಲಿಗನಂತೆ ಕಾಣಿಸಿದಳು ರಾಣಿ. ಒಂದು ಬುಟ್ಟಿ ತುಂಬ ಪೇರಲ

ಹಣ್ಣು ತರಿಸಿದಳು. ಒಂದು ಚೆನ್ನಾಗಿ ಹಣ್ಣಾದ ದೊಡ್ಡ ಹಣ್ಣಿನ ತೊಟ್ಟಿನ ಅರ್ಧ ಭಾಗದಲ್ಲಿ ಕಾಲಕೂಟ (ಭಯಂಕರ ವಿಷ)ವನ್ನು ತುಂಬಿದಳು. ಅದನ್ನೇ ಬುಟ್ಟಿಯಲ್ಲಿ ಎಲ್ಲಕ್ಕೂ ಮೇಲೆ ಇರಿಸಿದಳು. ನೋಡಲು ಹಣ್ಣು ಬಹಳ ಇನಿದಾಗಿತ್ತು. ಯಾರು ನೋಡಿದರೂ ಮೊದಲು ಆ ಹಣ್ಣನ್ನೇ ಎತ್ತಿಕೊಳ್ಳುವಂತಿತ್ತು. ತನ್ನ ಕೆಲಸವನ್ನು ಇಂದು ಗೆದ್ದೇ ತೀರಬೇಕೆಂದು ರಾಣಿ ಪಂಥ ತೊಟ್ಟಳು.

ಈ ಸಲ ವೇಷಧಾರಿ ರಾಣಿ 'ಹಣ್ಣು ಬೇಕೇ ಹಣ್ಣು' ಎಂದು ಕೂಗಲಿಲ್ಲ. ನೇರವಾಗಿ ಹೋಗಿ ಬಾಗಿಲನ್ನು ತಟ್ಟಿದಳು. 'ಬಾಗಿಲು ತೆರೆಯಿರಪ್ಪ' ಎಂದು ಕೂಗಿದಳು.

"ನಾನು ಯಾರು ಬಂದರೂ ಬಾಗಿಲು ತೆರೆಯುವವಳಲ್ಲ. ಯಾರಿಗೂ ಬಾಗಿಲು ತರೆಯಬೇಡವೆಂದು ನಮ್ಮ ಗುಜ್ಜಾರಿಗಳು ಕಟ್ಟಪ್ಪಣೆ ಮಾಡಿದ್ದಾರೆ" ಎಂದು ತುಷಾರಮಣಿ ದೃಢವಾಗಿ ಹೇಳಿದಳು.

"ಯಾರಮ್ಮಾ ನೀನು. ಗುಜ್ಜಾರಿಗಳಿಗೆ ಮಕ್ಕಳು-ಮರಿ ಏನೂ ಇಲ್ಲವಲ್ಲ! ನಾನು ಈ ಬೆಟ್ಟದ ಆಚೆಗೆ ಇರುವ ತೋಟಗಾರ. ಗುಜ್ಜಾರಿಗಳೊಡನೆ ನನ್ನದು ತುಂಬ ಸ್ನೇಹ. ನಾನು ಆಗೀಗ ಅವರಿಗೆ ನಮ್ಮ ತೋಟದ ಹಣ್ಣನ್ನು ಕಾಣಿಕೆಯಾಗಿ ತಂದು ಕೊಡುತ್ತಿರುತ್ತೇನೆ. ಪಾಪ! ನೀನಾರೋ ಹೊಸಬಳೆಂದು ತೋರುತ್ತೆ. ನಾನು ಈ ಹಣ್ಣಿನ ಬುಟ್ಟಿ ಇರಿಸಿ ಹೋಗುತ್ತೇನೆ, ತಿಳಿಯಿತೇ. ಅವರು ಬಂದಮೇಲೆ

ಇದನ್ನೆಲ್ಲ ಅವರಿಗೆ ಹೇಳಿಬಿಡು. ಅವರಿಗೆ ಗೊತ್ತಾಗುತ್ತದೆ"—ಎಂದು ವೇಷಧಾರಿ ರೈತ ಸವಿಯಾಗಿ, ಮಣಿ ಮೋಸ ಹೋಗುವಂತ ಹೇಳಿಬಿಟ್ಟ

ತುಷಾರಮಣಿಗೆ ಇದು ನಿಜವೆನಿಸಿತು 'ಇವನು ಗುಜ್ಜಾರಿಗಳ ಸ್ನೇಹಿತನಿದ್ದರೂ ಇರಬಹುದು. ಪಾಪ! ಇವನನ್ನು ಮರಳಿ ಕಳಿಸಿಬಿಡಬೇಕೆ? ಗುಜ್ಜಾರಿಗಳು ನನ್ನ ಮೇಲೆ ಕೋಪಮಾಡಿಕೊಳ್ಳಬಹುದಲ್ಲ' ಎಂದುಕೊಂಡಳು ಮಣಿ ಬಾಗಿಲು ತೆರೆದೇಬಿಟ್ಟಳು ಅಹುದು, ನಿಜಕ್ಕೂ ತೋಟದ ರೈತ "ಬನ್ನಿ ಅಪ್ಪ, ಬನ್ನಿ" ಎಂದು ಒಳಗ ಬರಮಾಡಿಕೊಂಡಳು. ರೈತ ಬುಟ್ಟಿಯನ್ನಿಳಿಸಿದ "ಮಗಳೇ ನೀನಾರಮ್ಮಾ? ನಿನ್ನ ಹೆಸರೇನು?" ಎಂದು ಪ್ರೀತಿಯಿಂದ ಕೇಳಿದ

"ನಾನೊಬ್ಬ ಪರದೇಶಿ ನನ್ನ ಹೆಸರು 'ತುಷಾರ ಮಣಿ.' ಬಂದು ಇದೀಗ ಕೆಲವು ವರುಷಗಳಾದುವು" ಎಂದು ಮಣಿ ಉತ್ತರಿಸಿದಳು.

"ಎಷ್ಟು ದೊಡ್ಡ ದೊಡ್ಡ ಹಣ್ಣುಗಳಿವೆಯಲ್ಲ ಇವು" ಎಂದು ಮಣಿ ಕುತೂಹಲದಿಂದ ಕೇಳಿದಳು.

"ಓ ಇದಕ್ಕೇ ದೊಡ್ಡವೆನ್ನುತ್ತೀಯೇನು? ಇದಕ್ಕಿಂತ ದೊಡ್ಡದಾಗುತ್ತವೆ. ನಿನಗೆ ಬೇಕಾದರೆ ನಾಳೆ ತಂದು ತೋರಿಸುತ್ತೇನೆ. ಇದೋ ನೋಡು, ಈ ಜಾತಿಯ ಹಣ್ಣು ಬಲು ಸಿಹಿ. ಬೇಕಾದರೆ ತಿಂದು ನೋಡಮ್ಮಾ" ಎಂದು

ಮೆಲುದನಿಯಿಂದ ಹೇಳಿ, ವಿಷಪೂರಿತ ಹಣ್ಣನ್ನು ರೈತ ಅವಳ ಕೈಗೆ ಕೊಡಹೋದ. ಕುಮಾರಮಣಿ ಸ್ವಲ್ಪ ಸಂಶಯ ದಿಂದ ಹಣ್ಣನ್ನು ತೆಗೆದುಕೊಳ್ಳಲು ಹಿಂದುಮುಂದು ನೋಡಿದಳು. "ಹುಚ್ಚಮ್ಮ, ಸಂಕೋಚ ಏಕೆ. ನಾನೂ ನಿನ್ನೊಡನೆ ತಿನ್ನುವೆ ಬೇಕಾದರೆ" ಎನ್ನುತ್ತ ರೈತ ಆ ಹಣ್ಣಿನ ಕೆಂಪಿನ ಅರ್ಧ ಭಾಗವನ್ನು ಚಾಕುವಿನಿಂದ ಕೊಯ್ದು ಅವಳ ಮುಂದೆಯೇ ತಿಂದುಬಿಟ್ಟ. ಅದರಲ್ಲಿ ವಿಷವೇ ಇರಲಿಲ್ಲ ಅಲ್ಲವೇ?

ಮಣಿಯ ಸಂಶಯ ನೀಗಿತು. ಒಕ್ಕಲಿಗನ ಒಳ್ಳೊಳ್ಳೆ ಮಾತು, ತನ್ನಮೇಲೆ ತೋರಿದ ಪ್ರೀತಿ ಇವನ್ನು ಕಂಡು ಮಣಿ ಸಂತೋಷದಿಂದ ಉಳಿದ ಅರ್ಧ ಹಣ್ಣನ್ನು ತಿಂದಳು. "ಅಮ್ಮಾ ನಾನಿನ್ನು ಬರುತ್ತೇನೆ. ನಾಳೆ ಇದಕ್ಕಿಂತ ಒಳ್ಳೆಯ ಹಣ್ಣು ತಂದು ಕೊಡುತ್ತೇನೆ" ಎನ್ನುತ್ತ ರೈತ ಹೊರಟು ಬಿಟ್ಟ. ವೇಷಧಾರಿ ರಾಣಿ ಸಂತೋಷದಿಂದ ಅರಮನೆ ಸೇರಿದಳು. ಇತ್ತ ಘೋರ ವಿಷವನ್ನು ತಿಂದುದರ ಪರಿಣಾಮವಾಗಿ ಮಣಿ ನೆಲಕ್ಕೊರಗಿಬಿಟ್ಟಳು.

ರಾಣಿಗೆ ಸಂತೋಷವೇ ಸಂತೋಷ. ಒಮ್ಮೆ ಏನನ್ನೋ ಬಾಯಲ್ಲಿ ಹಾಡಿಕೊಳ್ಳುತ್ತಿದ್ದಳು, ಒಮ್ಮೆ ತನ್ನಷ್ಟಕ್ಕೆ ನಗುತ್ತಿದ್ದಳು. ಅಷ್ಟು ಆನಂದತುಂದಿಲಳಾಗಿದ್ದಳವಳು. "ಏ ಮಣಿ, ಜಗತ್ತಿನಲ್ಲಿ ನೀನೇ 'ಸುಂದರಿ' ಎಂದೆನಿಸಿಕೊಳ್ಳಬೇಕೆಂದಿದ್ದೆ ಅಲ್ಲವೇ? ಆದರೆ ಅದು ಈಗ ನಿನ್ನಿಂದ ಸಾಧ್ಯ

ವಿಲ್ಲ ಇನ್ನು ನಿನ್ನನ್ನು ಯಾರೂ ಬದುಕಿಸಲಾರರು...
ಆ ಗುಜ್ಜಾರಿಗಳೋ ? ಅವರಿಂದಲೂ ಸಾಧ್ಯವಿಲ್ಲ ಇನ್ನು ಪ್ರಪಂಚದಲ್ಲೆಲ್ಲ ನಾನೇ ರೂಪವತಿ" ಎಂದು ತನಗೆ ತಾನೆ ಆವೇಶದಿಂದ ಹೇಳಿಕೊಂಡಳು. ಇಷ್ಟಕ್ಕೇ ಅವಳಿಗೆ ತೃಪ್ತಿ ಎನಿಸಲಿಲ್ಲ ಮಾಯದ ಕನ್ನಡಿಯ ಹತ್ತಿರ ಬಂದಳು. ಅಟ್ಟಹಾಸದಿಂದ ಅದನ್ನು ಕೇಳಿದಳು. "ಈಗಲಾದರೂ ಒಪ್ಪಿಕೊಳ್ಳುವೆಯೋ ಇಲ್ಲವೋ, ನಾನು ಸುಂದರಿ ಎಂದು" ಈ ಸಲ ಮಾಯದ ಕನ್ನಡಿಯೂ ಒಪ್ಪಿಕೊಂಡಿತು 'ರಾಣೀ, ಈಗ ಸದ್ಯವಂತೂ ನೀನು ಪ್ರಪಂಚದಲ್ಲಿಯೇ ಅತಿ ಚೆಲುವೆ" ಎಂದು.

ಹೊತ್ತು ಮುಳುಗಿ ಕತ್ತಲಾಯಿತು ಗುಜ್ಜಾರಿಗಳು ಮರಳಿ ಬಂದರು. ತೆರೆದ ಬಾಗಿಲನ್ನು ಕಂಡು, ಮತ್ತೇನು ಘಟಿಸಿತೋ ಎಂದು ಅಂಜಿದರು. ಒಳಗೆ ಬಂದು ದೀಪ ಹಚ್ಚಿ ನೋಡಿದರು, ತುಷಾರಮಣಿ ಕಲ್ಲಿನಂತೆ ಬಿದ್ದು ಕೊಂಡಿದ್ದಾಳೆ. 'ಮತ್ತೇನು ದುರದೃಷ್ಟ ಬಂತಪ್ಪಾ ಇವ ಳಿಗೆ" ಎಂದುಕೊಂಡು ಅವಳನ್ನು ಪೂರ್ತಿಯಾಗಿ ಪರೀಕ್ಷಿಸಿ ನೋಡಿದಳು. ಅವಳ ಮೂಗಿಗೆ ಕೈ ಒಯ್ದು ನೋಡಿದರು. ಉಸಿರಾಟ ನಿಂತುಹೋಗಿತ್ತು. ಎಲ್ಲಿಯಾದರೂ ವಿಷದ ಚಿಹ್ನೆಗಳಿವೆಯೇ ಎಂದು ನೋಡಿದರು. ಕಳೆದ ಸಲದಂತೆ ನೆತ್ತಿಯಲ್ಲಿ ವಿಷಪ್ರಯೋಗವಾಗಿದೆಯೇ ಎಂದು ನೋಡಿ ದರು. ಗಾಯ-ಗೀಯ ಏನಾದರೂ ಇವೆಯೇ ಎಂದು

ಪರೀಕ್ಷಿಸಿದರು— ಆದರೆ ಏನೂ ಕಾಣಸಿಗಲಿಲ್ಲ, ಗೋತ್ರಾಗ ಲಿಲ್ಲ ಹೆಸರಿಗ ತಕ್ಕಂತೆ ಅವಳ ದೇಹ ಮಂಜುಗಡ್ಡೆಯಂತೆ ತಣ್ಣಗಾಗಿಹೋಗಿತ್ತು ಅಮೃತಶಿಲೆಯ ಮೂರ್ತಿಯಂತೆ ಅವಳು ಕಾಣಿಸುತ್ತಿದ್ದಳು ಆದರೂ ಅವಳ ಮುಖದಲ್ಲಿನ ಮುಗುಳು ನಗೆ ಗುಜ್ಜಾರಿಗಳಲ್ಲಿ ಆಸ ಹುಟ್ಟಿಸುತ್ತಿತ್ತು ಈಗ ಎದ್ದಾಳು, ಕೊಂಚ ಹೊತ್ತಿನಲ್ಲೇ ಜೀವ ಬಂದೀತು ಎಂದು ಸುಮ್ಮನೆ ಕುಳಿತರು ಊಟ ಕೂಡ ಮರೆತು ಹೋಯಿತು ಅವರಿಗೆ ಹಾಗೆಯೇ ಬೆಳಗಿನವರೆಗೆ ಕುಳಿತು ಕೊಂಡರು ಒಬ್ಬರೂ ನಿದ್ದೆ ಮಾಡಲಿಲ್ಲ. ಗುಜ್ಜಾರಿಗಳದು ಅಷ್ಟೊಂದು ಸ್ನೇಹ, ಪ್ರೇಮ ಅವಳಲ್ಲಿ ಹೀಗೆಯೇ ಅವರು ಪೂರ್ತಿ ಮೂರು ದಿವಸಗಳನ್ನು ಕಳೆದರು. ತಮ್ಮ ಕೆಲ ಸಕ್ಕೆ ಕೂಡ ಹೋಗದೆ, ಈಗ ಏಳುವಳೋ ಇನ್ನೊಂದು ಕ್ಷಣಕ್ಕೆ ಏಳುವಳೋ ಎಂದು ತವಕಿಸುತ್ತ ಕುಳಿತುಕೊಂಡರು. ಆದರೆ ಎಲ್ಲವೂ ನಿಷ್ಫಲವಾಯಿತು. ತುಷಾರಮಣಿಯ ಚಿರ ನಿದ್ದೆ ಮುಗಿಯಲಿಲ್ಲ.

ನಾಲ್ಕನೆಯ ದಿನವೂ ಮಣಿ ಅಲುಗಾಡಲಿಲ್ಲ, ಉಸಿ ರಾಡಲಿಲ್ಲ. ಗುಜ್ಜಾರಿಗಳು ಹತಾಶರಾದರು. ಇನ್ನು ಅವಳ ಅಂತ್ಯಸಂಸ್ಕಾರ ಮಾಡಿಬಿಡುವುದೇ ಎಂದು ಯೋಚಿಸಿದರು. ಏಕೋ ಮನಸ್ಸು ಬಗ್ಗಲಿಲ್ಲ. ಇಂಥ ಕೋಮಲಾಂಗಿಯಾದ ಮುದ್ದು ಹುಡುಗಿಯನ್ನು ಮಣ್ಣುಗೂಡಿಸುವುದೇ? ಛೆ, ಎಂದಿಗೂ ಸಾಧ್ಯವಿಲ್ಲ. ತಾವು ಜೀವಿಸಿರುವವರೆಗೂ ಅವ

ಳನ್ನು ನೋಡುವುದು ಸಾಧ್ಯವಾಗಬೇಕೆಂದು ಅವರ ಹಂಬಲ. ಅದಕ್ಕಾಗಿ ಅವರೊಂದು ಕಾಜಿನ ದೊಡ್ಡ ಪೆಟ್ಟಿಗೆಯನ್ನು ತಯಾರಿಸಿದರು. ಅದರಲ್ಲಿ ಮೆತ್ತಗೆ ರೇಶ್ಮೆಯ ಬಟ್ಟೆಗಳನ್ನು ಹಾಸಿ, ಸುವಾಸಿಕ ದ್ರವ್ಯಗಳನ್ನು ಒಳಗೆಲ್ಲ ಚಿಮುಕಿಸಿ ನಟ್ಟ ನಡುವೆ ತುಷಾರಮಣಿಯ ಶವವನ್ನು ಅಂಗಾತ ಮಲಗಿಸಿದರು ಪೆಟ್ಟಿಗೆಯ ಮೇಲೆ ದಪ್ಪಕ್ಷರದಲ್ಲಿ "ರಾಜಕುಮಾರಿ-'ತುಷಾರಮಣಿ'" ಎಂದು ಬರೆದರು

ಈ ಪ್ರೇಮ ಪ್ರತೀಕವಾದ ಗಾಜಿನ ಪೆಟ್ಟಿಗೆಯನ್ನು ಗುಜ್ಜಾರಿಗಳು ಹೊತ್ತೊಯ್ದು ಬೆಟ್ಟದ ತುತ್ತತುದಿಯಲ್ಲಿ ಇರಿಸಿದರು ಸರತಿಯಂತೆ ಏಳು ಮಂದಿಯಲ್ಲೊಬ್ಬ ಗುಜ್ಜಾರಿ ಇದಕ್ಕೆ ಕಾವಲಾಗಿರುತ್ತಿದ್ದ ಹೀಗೆಯೇ ಅನೇಕ ದಿನಗಳು ಕಳೆದು ಹೋದುವು. ಬೆಟ್ಟದ ಮಾರ್ಗವಾಗಿ ಹೋಗುವ ಪ್ರವಾಸಿಕರು ತುಷಾರಮಣಿಯ ಶವವನ್ನು ನೋಡಿ ಕನಿಕರ ಪಟ್ಟುಕೊಳ್ಳುತ್ತಿದ್ದರು. ಪಶು-ಪಕ್ಷಿಗಳು ಕೂಡ ಅವಳ ಈ ಮುಗ್ಧ ಮನೋಹರವಾದ ಮೃತಶರೀರವನ್ನು ಕಂಡು ಶೋಕಿಸುತ್ತಿದ್ದುವು. ಹೂ-ಗಿಡಗಳು ಕೂಡ ಶೋಕಾವೇಗದಿಂದ ತಮ್ಮ ಹೂವು, ಎಲೆಗಳನ್ನು ಉದುರಿಸುತ್ತಿದ್ದುವು. ಬೆಟ್ಟದ ಮೇಲಿಂದ ಹೋಗುವ ಮೋಡಗಳು ಅವಳ ಸುಂದರ ಮೃತಶರೀರವನ್ನು ಕಂಡು ಅಳುತ್ತ, ಕಣ್ಣೀರುಗರೆಯುತ್ತ ಹೋಗುತ್ತಿದ್ದುವು. ಅಂತೂ ತುಷಾರಮಣಿಯ ಸಾವು ಎಲ್ಲರನ್ನು ದುಃಖ-ಕಳವಳಗಳಲ್ಲಿ ಕೆಡವಿತ್ತು.

೫

ಹೀಗೆಯೇ ಎರಡು ವರುಷಗಳು ಸಂದುಹೋದುವು. ದಿನವೂ ಒಬ್ಬ ಗುಜ್ಜಾರಿಯ ಕಾವಲು ನಡೆದೇ ಇತ್ತು. ಇಷ್ಟು ದಿನಗಳಾದರೂ ತುಷಾರಮಣಿಯ ದೇಹದ ಚೆಲುವು ಕಳೆಗುಂದಲಿಲ್ಲ. ಗಾಢವಾಗಿ ನಿದ್ರಿಸಿದ್ದಾಳೋ ಏನೋ ಎನ್ನುವಂತಿತ್ತು ಅವಳ ಮುಖಕಾಂತಿ ಹೀಗಿರುವಾಗ ಒಂದು ದಿನ ಒಬ್ಬ ಅರಸುಕುಮಾರ ಆ ಬೆಟ್ಟದ ಅರಣ್ಯಕ್ಕೆ ಬೇಟೆಗಾಗಿ ಬಂದ ಅವನ ಜೊತೆಗೆ ಅವನ ಕೆಲವು ಸರದಾರರೂ, ಕುದುರೆಸವಾರರೂ ಬಂದಿದ್ದರು ಬೇಟೆ ಮುಗಿದಮೇಲೆ ರಾಜಕುಮಾರ 'ಹಾಗೆಯೇ ಒಮ್ಮೆ ಸುತ್ತಾಡಿಕೊಂಡುಬರೋಣ' ಎಂದು ಒಬ್ಬನೆ ಬೆಟ್ಟದ ತುದಿಗೆ ಅಲೆಯುತ್ತ ಬಂದ.

ಒಂದು ಗಿಡದಡಿಯಲ್ಲಿ ಏನೋ ಹೊಳೆಹೊಳೆದಂತೆ ಕಾಣಿಸಿತು. ಒಬ್ಬ ಗುಜ್ಜಾರಿ ಬೇರೆ ಬಳಿಯಲ್ಲಿಯೇ ದೊಣ್ಣೆ ಹಿಡಿದುಕೊಂಡು ನಿಂತಿದ್ದಾನೆ. 'ಅದೇನು ಹಾಗೆ ನಿಂತಿದ್ದಾನೆ!' ಎಂದು ಕುತೂಹಲದಿಂದ ನೋಡಲು ಬಂದ ಅವನು. ಗಾಜಿನ ಪೆಟ್ಟಿಗೆಯಲ್ಲಿ ಒಬ್ಬ ಚೆಲುವೆ ಸುಖವಾಗಿ ನಿದ್ರಿಸುತ್ತಿದ್ದಾಳೆ. ಪೆಟ್ಟಿಗೆಯ ಮೇಲೆ 'ರಾಜಕುಮಾರಿ-ತುಷಾರಮಣಿ' ಎಂದ ಬರೆಯಲಾಗಿತ್ತು. ಅರಸುಕುಮಾರನಿಗೆ ಆಶ್ಚರ್ಯವಾಯಿತು.

"ಇದೆಲ್ಲಾ ಹೀಗೇಕಪ್ಪಾ?. ..... ಈ ರಾಜಕುಮಾರಿಯನ್ನು ಪೆಟ್ಟಿಗೆಯಲ್ಲಿ ಇರಿಸಿದ್ದೇಕೆ?" ಎಂದು ಅವನು

ಗುಜ್ಜಾರಿಗೆ ಹೇಳಿದ

ಗುಜ್ಜಾರಿ ನಡೆದ ಸಂಗತಿಯನ್ನೆಲ್ಲ ಹೇಳಿದ. ತುಷಾರ ಮಣಿಯ ನಾಡಿ ಚೆನ್ನಾಗಿ ನೋಡಿದರೆ ಅವಳನ್ನು ಬದುಕ ಬಹುದೇನೋ ಎಂದೆನಿಸಿತು ರಾಜಕುಮಾರನಿಗೆ. ತಾನೊಬ್ಬ ರಾಜಕುಮಾರನೆಂದೂ, ತುಷಾರಮಣಿಯನ್ನು ಪೆಟ್ಟಿಗೆಸಹಿತ ಹಾಗೆಯೇ ಕೊಟ್ಟರೆ ಅವಳನ್ನು ತನ್ನ ರಾಜ್ಯದ ದೊಡ್ಡ ದೊಡ್ಡ ವೈದ್ಯರಿಂದ ಬದುಕಿಸಲು ಪ್ರಯತ್ನ ಮಾಡುವೆನೆಂದೂ, ಹಾಗೆ ತನಗೆ ಕೊಟ್ಟರೆ ಹೇರಳವಾಗಿ ಹಣ ಕೊಡುವೆನೆಂದೂ ಅವನು ಗುಜ್ಜಾರಿಗೆ ಹೇಳಿದ. ಅರಸು ಮಗನ ಈ ಮಾತು ಕೇಳಿ 'ತುಷಾರಮಣಿಯ ದೈವ ಅನುಕೂಲವಾಗಿದ್ದರೆ ಬದುಕಿದರೂ ಬದುಕಬಹುದೆಂ'ಬ ಆಸೆ ಮೂಡಿತು ಗುಜ್ಜಾರಿಗೆ. 'ಇನ್ನು ಆರು ಜನ ನನ್ನ ಸಹೋದರರಿದ್ದಾರೆ. ಅವರೂ ಬರಲಿ ಎಲ್ಲರೂ ಒಪ್ಪಿದರೆ ಹಾಗೆ ಮಾಡುವೆಯಂತೆ' ಎಂದು ಹೇಳಿದ ಆತ.

ಅಷ್ಟರ ಕತ್ತಲಾಯಿತು. ಉಳಿದ ಆರು ಜನ ಗುಜ್ಜಾರಿಗಳು ಎಂದಿನಂತೆ 'ತುಷಾರಮಣಿ'ಯ ದರ್ಶನಕ್ಕೆ ಬಂದರು. ಅರಸುಕುಮಾರ ತನ್ನ ಇಚ್ಛೆಯನ್ನು ಹಿರಿಯ ಗುಜ್ಜಾರಿಗೆ ಹೇಳಿದ. "ಕುಮಾರ, ನಮಗೇನೂ ದುಡ್ಡಿನ ಆಶೆಯಿಲ್ಲ. ನಮ್ಮ ಈ ಮುದ್ದು ಹುಡುಗಿ ಬದುಕಿಕೊಂಡಿದ್ದರೆ ಅದೇ ನಮಗೆಲ್ಲ ಸಂತೋಷ. ಪ್ರಯತ್ನ ಮಾಡಿಯಂತೂ ನೋಡು. ದೈವೇಚ್ಛೆ ಇದ್ದರೆ ಇವಳೇಕೆ ಬದುಕ

ಬಾರದು ? ಆದರೆ ಒಂದು ಶರತ್ತು. ಇವಳು ಬದುಕಿದ್ದರೆ ಮಾತ್ರ ಇವಳನ್ನು ತಂದು ನನಗೊಪ್ಪಿಸಬೇಕು ಒಪ್ಪಿಗೆಯೇ ? ” ಎಂದು ಹಿರಿಯ ಪೂಜಾರಿ ರಾಜಕುಮಾರನನ್ನು ಕೇಳಿದ.

“ ಆಗಬಹುದು. ತಾವು ನನ್ನ ಮಾತಿಗೆ ಒಪ್ಪಿಕೊಂಡುದಕ್ಕೆ ಧನ್ಯವಾದಗಳು ” ಎಂದು ಹೇಳಿ ರಾಜಕುಮಾರ ತನ್ನೊಬ್ಬ ಕುದುರೆ ಸವಾರನನ್ನು ಕರೆದ. ಕುದುರೆಯ ಮೇಲೆ ಪೆಟ್ಟಿಗೆಯನ್ನು ಜಾಗ್ರತೆಯಿಂದ ಇರಿಸಿದರು. “ ಪೆಟ್ಟಿಗೆಗೆ ಸ್ವಲ್ಪವೂ ಧಕ್ಕೆ ತಗಲದಂತೆ ಕುದುರೆಯನ್ನು ಸಾವಕಾಶವಾಗಿ ನಡೆಸುತ್ತ ಸಾಗಿರಿ ” ಎಂದು ರಾಜಕುಮಾರ ಸವಾರನಿಗೆ ಆಜ್ಞೆ ಇತ್ತನು. ತುಷಾರಮಣಿಯ ಪೆಟ್ಟಿಗೆ ಹೊತ್ತ ಕುದುರೆ ನಿಧಾನವಾಗಿ ಗುಡ್ಡದ ಓರೆಗುಂಟ ನಡೆಯಿತು.

ರಾಜಕುಮಾರನ ಪಟ್ಟಣ ಅಲ್ಲಿಂದ ನಾಲ್ಕಾರು ಮೈಲು ದೂರದಲ್ಲಿತ್ತು. ಸುತ್ತಲಿನ ಪ್ರದೇಶವೆಲ್ಲ ಗುಡ್ಡಗಾಡು. ಪೆಟ್ಟಿಗೆಗೆ ಧಕ್ಕೆ ತಗಲಬಾರದೆಂದು ರಾಜಮಾರ್ಗದಿಂದ ಬರುವಂತೆ ರಾಜಕುಮಾರನ ಅಪ್ಪಣೆಯಾಗಿತ್ತು. ತೀರ ಸಮೀಪದ ಒಂದು ಕಾಲುದಾರಿಯಿಂದ ಆ ರಾಜಮಾರ್ಗವನ್ನು ಸೇರಬೇಕಾಗಿತ್ತು. ಕಾಲುದಾರಿಯಲ್ಲಿ ಸಾಗಿದಾಗ, ಅಕಸ್ಮಾತ್ತಾಗಿ ಕುದುರೆಯ ಕಾಲು ಜಾರಿ ಒಂದು ತಗ್ಗಿನಲ್ಲಿ ಮುಗ್ಗರಿಸಿಬಿಟ್ಟಿತು.

ಗಾಜಿನ ಪೆಟ್ಟಿಗೆ ಮಗುಚಿಬಿದ್ದಿತು ಕಾಜು ದಪ್ಪಗಿದ್ದ

ದರಿಂದ ಸ್ವಲ್ಪ ಸೀಳುಬಿದ್ದಿತೇ ಹೊರತು ಒಡೆಯಲಿಲ್ಲ ತುಷಾರಮಣಿಯ ಅದೃಷ್ಟ ಚೆನ್ನಾಗಿತ್ತು. ಈ ಆಘಾತ ಅವಳ ಒಳ್ಳೆಯದಕ್ಕಾಗಿಯೇ ಆಯಿತೋ ಏನೋ! ಅವಳ ಬಾಯಿಯಿಂದ ಲೋಳೆಯಂಥ ಪದಾರ್ಥ ಹೊರಗೆ ಬಿತ್ತು. ಅದು ಮತ್ತೇನೂ ಅಲ್ಲ, ಪೇರಲ ಹಣ್ಣಿನಲ್ಲಿದ್ದ ಭಯಂಕರ ವಿಷ. ಪುಣ್ಯಕ್ಕೆ ಅವಳು ತಿಂದ ಹಣ್ಣಿನೊಳಗಿನ ವಿಷ ಪದಾರ್ಥ ಗಂಟಲೊಳಗೇ ಸಿಕ್ಕಿಕೊಂಡಿತ್ತು. ಈ ಬಲವಾದ ಆಘಾತದಿಂದ ಅದೀಗ ಹೊರಬಿದ್ದಿತು. 'ದೈವಾನುಕೂಲ ವಿದ್ದರೆ ಘೋರ ವಿಷವೂ ಬಾಧಿಸಲಾರದು' ಎಂಬ ಮಾತು ಸುಳ್ಳಲ್ಲ. ಅವಳ ದೀರ್ಘವಾದ ಮೂರ್ಛೆ ಈಗ ಕಳೆದು ಹೋಯಿತು. ತುಷಾರಮಣಿ ಕಣ್ಣು ತೆರೆದಳು!

ತುಷಾರಮಣಿಯಿದ್ದ ಪೆಟ್ಟಿಗೆಗೆ ಬಲವಾದ ಆಘಾತ ವಾಗಿದೆ ಎಂದು ತಿಳಿದೊಡನೆ ಅರಸುಕುಮಾರ ಆ ಸ್ಥಾನಕ್ಕೆ ಓಡಿಬಂದ. ನೋಡುತ್ತಾನೆ, ಮಣಿ ಕಣ್ಣು ಪಿಳುಕಿಸುತ್ತಿ ದ್ದಾಳೆ, ಉಸಿರಾಡಿಸುತ್ತಿದ್ದಾಳೆ! ಅವನಿಗೆ ಅತ್ಯಾಶ್ಚರ್ಯ ವಾಯಿತು, ಆನಂದವಾಯಿತು.

ಸುತ್ತಲೆಲ್ಲ ಜನರು, ಕುದುರೆಗಳು ಇವನ್ನೆಲ್ಲ ಕಂಡು ತುಷಾರಮಣಿಗೆ ಅಚ್ಚರಿಯಾಯಿತು, ಭಯವೂ ಎನ್ನಿಸಿತು. ಇದು ಕನಸೋ ನನಸೋ ಒಂದೂ ತೋಚದಾಯಿತು ಅವಳಿಗೆ. "ಇದೇನು, ನಾನೆಲ್ಲಿದ್ದೇನೆ? ನೀವಾರು?" ಎಂದು ಪ್ರಶ್ನಿಸಿದಳು ಆಕೆ.

ರಾಜಕುಮಾರ ಪಟ್ಟಿಗೆಯ ಬಾಗಿಲನ್ನು ಪೂರ್ತಿಯಾಗಿ ತೆರೆದು ಅವಳನ್ನು ಹೊರಗೆ ಒರುಪಂತ ಕೇಳಿಕೊಂಡ 'ನಾನು ಪಕ್ಕದ ರಾಜ್ಯದ ಯುವರಾಜ ನಿನ್ನನ್ನು ಬದುಕಿಸಲು ಒಯ್ಯುತ್ತಿದ್ದೆ ಆದರ ಸುದೈವದಿಂದ ತಾನಾಗಿಯೇ ನಿನ್ನ ಜೀವ ತಿರುಗಿತು' ಎಂದು ನಡೆದ ಸಂಗತಿಯನ್ನೆಲ್ಲ ಸಂಕ್ಷೇಪವಾಗಿ ಅವನು ತುಷಾರಮಣಿಗೆ ವಿವರಿಸಿದ ಮಣಿಗೆ ಇದನ್ನು ಕೇಳಿ ಆನಂದಾಶ್ಚರ್ಯಗಳು ಏಕಕಾಲಕ್ಕಾದುವು

ಅರಮನೆಗೆ ಬಂದು ಯುವರಾಜ ತನ್ನ ತಂದೆ-ತಾಯರಿಗೆ ತುಷಾರಮಣಿಯನ್ನು ತೋರಿಸಿ, ನಡೆದ ವಿಚಿತ್ರ ಸಂಗತಿಯನ್ನು ಹೇಳಿದನು ರಾಜ-ರಾಣಿಯರಿಗೆ ಈ ಚೆಲುವಾದ ನವಯುವತಿಯನ್ನು ಕಂಡು ತುಂಬ ಸಂತೋಷವಾಯಿತು ಅವಳೂ ರಾಜಕನ್ಯೆ ಎಂದು ತಿಳಿದಮೇಲಂತೂ ಅವಳನ್ನು ತಮ್ಮ ಸೊಸೆಯನ್ನಾಗಿ ಮಾಡಿಕೊಳ್ಳಬೇಕೆಂದು ಎನಿಸಿತು ಅವರಿಗೆ ಆಗಲೇ ಆಸ್ಥಾನದ ಶಾಸ್ತ್ರಿಗಳನ್ನು ಕರೆಯಿಸಿ, ತಮ್ಮ ಯುವರಾಜನ ಮದುವೆಯನ್ನು ತುಷಾರಮಣಿಯೊಡನೆ ನಿಶ್ಚಯಿಸಿ, ಶುಭ ಮುಹೂರ್ತದಲ್ಲಿ ಮದುವೆಯನ್ನು ಇರಿಸಿಬಿಟ್ಟರು.

ಮದುವೆಯ ಕಾಲ ಸಮೀಪಿಸಿತು. ದೇಶ-ದೇಶದ ಅರಸರಿಗೆಲ್ಲ ಮದುವೆಯ ಆಮಂತ್ರಣ ಹೋಯಿತು. ಇಡಿಯ ಊರಿಗೇ ಮಂಟಪ ಹಾಕಲಾಯಿತು. ಊರಿಗೆ

ಊರೇ ಮದುವೆಯ ಸಂಭ್ರಮದಲ್ಲಿ ತೊಡಗಿತು. ಗುಜ್ಜಾರಿ ಗಳನ್ನು ಮದುವೆಗ ನಾಲ್ಕೈದು ದಿನ ಮುಂಚಿತವಾಗಿಯೇ ಕರೆಯಿಸಿಕೊಳ್ಳಲಾಯಿತು.

ತುಷಾರಮಣಿಯ ತಂದೆಯ ಮನೆಗೂ ಆಮಂತ್ರಣ ಹೋಯಿತು ಮಣಿಯ ಮಲಅಮ್ಮ ಈ ಗಂಡಿನ ಮನೆ ಯವರಿಗೆ ತೀರ ಹತ್ತಿರದ ಸಂಬಂಧವಾಗಬೇಕು. ಹೀಗಾಗಿ ಅವಳ ಮಲಅಮ್ಮ ಕೂಡ ಈ ಮದುವೆಗೆ ಬರುವ ಸಿದ್ಧತೆ ನಡೆಸಿದ್ದಳು 'ರಾಜಕುಮಾರನ ಮದುವೆ ಇದೆ' ಎಂದಿಷ್ಟೇ ಗೊತ್ತು ಅವಳಿಗೆ, ಆದರೆ ವಧು ಯಾರು, ಎಲ್ಲಿಯವಳು ಎಂಬುದು ಕೊಂಚವೂ ಗೊತ್ತಿರಲಿಲ್ಲ ಮದುವೆಗ ಹೊರ ಡುವುದಕ್ಕೆಂದು ಸಡಗರದಿಂದ ಒಳ್ಳೊಳ್ಳೆ ಬೆಲೆಯುಳ್ಳ ಜರ ತಾರಿ ಬಟ್ಟೆಗಳನ್ನು ಧರಿಸಿ ತನ್ನ ಮಾಯದ ಕನ್ನಡಿಯಲ್ಲಿ ನೋಡಿಕೊಂಡಳು. ತನ್ನ ಚೆಲುವಿಕೆಗೆ ತಾನೇ ಹಿಗ್ಗಿದಳು ಮುಖ ಅಗಲಿಸಿ, ಬಲು ಬಿಂಕದಿಂದ ಅವಳು ಕನ್ನಡಿ ಯನ್ನು ಕೇಳಿದಳು, "ನನ್ನಂಥ ಸುರಸುಂದರಿ ಆ ಮದು ವೆಯ ಮನೆಗೆ ಹೋದರೆ ಎಲ್ಲರ ದೃಷ್ಟಿಯೂ ನನ್ನ ಮೇಲೆಯೇ ಬೀಳಬಹುದಲ್ಲವೇ?" ಎಂದು.

"ಎಲ್ಲಿಯೋ ನೀನು ಭ್ರಮೆಯಲ್ಲಿರುವಂತೆ ಕಾಣುತ್ತೆ. ಈಗ ಮದುವೆಯಾಗತಕ್ಕ ವಧು, ಈ ಪ್ರಪಂಚದಲ್ಲಿಯೇ ಅತಿ ಚೆಲುವೆಯಾಗಿದ್ದಾಳೆ ಅವಳನ್ನು ನೀನು ಮೀರಿಸ ಲಾರೆ" ಎಂದು ಕನ್ನಡಿ ಹೇಳಿತು.

ರಾಣಿಗೆ ಸಿಡಿಲುಬಡಿದಂತಾಯಿತು ಅವಳ ಬಡಿವಾರವೆಲ್ಲ ಕೊಚ್ಚಿಕೊಂಡು ಹೋಯಿತು ಸಿಟ್ಟಿನಿಂದ ಅವಳ ಮೈಯೆಲ್ಲ ಛಿದ್ರಛಿದ್ರವಾಯಿತು ತನಗಿಂತ ರೂಪವತಿಯಾದ ಹೆಣ್ಣು ಅದಾವುದು? ಅವಳನ್ನೊಮ್ಮೆ ಸ್ವತಃ ನೋಡಿಕೊಂಡೇ ಬರುವೆ, ಎಂದು ರಾಣಿ ಮದುವೆಗೆ ಹೊರಟಳು. ತಾನು ಇಷ್ಟೆಲ್ಲ ಪ್ರಯತ್ನಿಸಿದರೂ ಈ ಚೆಲುವಿಕಯ ಸ್ಪರ್ಧೆಯಲ್ಲಿ ಕೊನೆಗೂ ಸೋಲಬೇಕಾಯಿತಲ್ಲ, ಎಂದು ಶ ಒಳಗೊಳಗೇ ಕೊರಗಹತ್ತಿದಳು

ರಾಜಕುಮಾರನ ಮದುವೆ ಒಳ್ಳ ವಿಜೃಂಭಣೆಯಿಂದ ಜರುಗಿತು ನವವಧು ಮತ್ತಾರೂ ಅಲ್ಲ 'ತುಷಾರಮಣಿ!' ಮಣಿಯು ಈ ಮಲತಾಯಿಯಿಂದ ಇದನ್ನು ಸೋಡಲಾಗಲಿಲ್ಲ ಅವಳ ಹೊಟ್ಟೆಯೇ ಉರಿದುಹೋಯಿತು ಇನ್ನು ಅವಳಿಂದ ತುಷಾರಮಣಿಯನ್ನು ತೊಡೆದುಹಾಕುವುದೂ ಅಸಂಭವ ಅವಳೀಗ ಅರಮನೆಯ ಆಶ್ರಯ ಹೊಂದಿದ್ದಾಳೆ. ಮದುವೆಯಾದ ಮೂರನೆಯ ದಿನವೇ ರಾಣಿ ಹೊರಟುಹೋದಳು ತನ್ನ ಅರಮನೆಗೆ ಬಂದು ಹಾಸಿಗೆಯನ್ನೇ ಹಿಡಿದುಬಿಟ್ಟಳು ಅವಳಿಗೊಂದು ಮನೋರೋಗವೇ ಅಂಟಿಕೊಂಡಿತು ಏನಾದರೂ ವಾಸಿಯಾಗದ ರೋಗವದು! ದಿನದಿನಕ್ಕೆ ಸಣ್ಣಾಗುತ್ತ ಒಂದು ದಿನ ರಾಣಿ ಸತ್ತುಹೋದಳು. ಅವಳ ಹೊಟ್ಟೆಕಿಚ್ಚೂ ಅವಳೊಡನೆ ತಣ್ಣಗಾಗಿಹೋಯಿತು.

ರಾಜಕುಮಾರ ಹಾಗು ತುಷಾರಮಣಿಯರ ಒತ್ತಾಯ

ದಿಂದ ಗುಜ್ಜಾರಿಗಳು ಒಂದು ತಿಂಗಳು ಕಾಲ ಅರಮನೆಯು ಲ್ಲಿಯೇ ಕಳೆದರು ನಂತರ ಅವರೂ ಹೊರಟರು ತುಷಾರ ಮಣಿ ಈಗ ಮದುವೆಯಾದ ಹುಡುಗಿ ಅವಳೇನೂ ಇನ್ನು ಗುಜ್ಜಾರಿಗಳ ಮನೆಗೆ ಬರುವಂತಿಲ್ಲ ಗುಜ್ಜಾರಿಗಳಿಗೆ ತುಂಬ ು:ಖವಾಯಿತು ಆದರೂ ಈಗ ತುಷಾರಮಣಿ ಆ ್ಟ ಮಲತಾಯಿಯ ಕೀಟಲೆಯಿಂದ ದೂರವಾಗಿದ್ದಾಳೆ, ಗೀಗ ತೊಂದರೆ ಇಲ್ಲ, ಎಂಬುದೇ ಅವರಿಗೊಂದು ಸಂತೋಷ.

ಗುಜ್ಜಾರಿಗಳೆಂದರೆ ಮಣಿಗೂ ತುಂಬ ಸ್ನೇಹ ಅವ ರನ್ನು ಬೀಳ್ಕೊಡುವಾಗ ಅವಳ ಕಣ್ಣಲ್ಲಿ ನೀರು ಹೊರ ಸೂಸಿತು "ವರುಷಕ್ಕೊಮ್ಮೆಯಾದರೂ ಬಂದು, ಕೆಲ ದಿನ ಇದ್ದು ಹೋಗಿ" ಎಂದು ಗುಜ್ಜಾರಿಗಳನ್ನು ಬಿನ್ನವಿಸಿ ಕೊಂಡಳು

"ಹಾಗೆಯೇ ಆಗಲಮ್ಮಾ" ಎಂದು ಗುಜ್ಜಾರಿಗಳು ಒಪ್ಪಿಕೊಂಡು ಹೊರಟುಹೋದರು

ತುಷಾರಮಣಿ ಈಗ ಸುಖಿಯಾದ್ದಾಳೆ. ಗುಜ್ಜಾರಿ ಗಳು ಪ್ರತಿವರುಷವೂ ಬರುತ್ತಾರೆ. ನಾಲ್ಕು ದಿನ ಇರು ತ್ತಾರೆ. ತಮ್ಮ ಸಾಕುಮಗಳ ಸಂಸಾರವನ್ನು ನೋಡಿ ನಲಿ ಯುತ್ತಾರೆ. ತಂದೆಗಳು ಬಂದಾಗ ಅವಳ ಆನಂದಕ್ಕೆ ಮೇರೆಯಿಲ್ಲ.

---

| | |
|---|---|
| ಆದರ್ಶದ ಕತೆಗಳು | ೦ ೪೦ |
| ರಕ್ಕರ ಗುರು! | ೦ ೩೭ |
| ವನಮಹೋತ್ಸವ | ೦ ೩೭ |
| ಮಹಾಪ್ರವಾಸಿ ಮಾರ್ಕೋಪೋಲೋ. | ೦ ೩೭ |
| ಮಾತಾಡುವ ಕುದುರೆ | ೦ ೪೦ |
| ಜಾಕ್ ಮತ್ತು ಟಿಲ್ | ೦.೨೦ |
| ಮಹಾನುಭಾವ ಶ್ರೀಬಸವಣ್ಣನವರು | ೦.೫೦ |
| ಬಂಗಾರದ ಹೆಜ್ಜೆ | ೦ ೪೦ |
| ತುಷಾರಮಣಿ | ೦.೪೦ |

**ಬರೆಯಿರಿ :**

**ಸಮಾಜ ಪುಸ್ತಕಾಲಯ, ಧಾರವಾಡ.**